ಫಲಜ್ಯೋತಿಷ್ಯ ಜ್ಯೋತಿರ್ಮಾಲಾ

ನಕ್ಷತ್ರ : ೮

# ಅಧಿಕಾರೀ ಜ್ಯೋತಿಷಿ

ಭಾಗ : ೧

ಲೇಖಕರು :

ಶ್ರೀ ಎನ್. ಕೆ. ಜೋಗಳೇಕರ



ತೇಜಸ್ವೀ ನಗರ, ಕಲಘಟಗಿ ರೋಡ, ಧಾರವಾಡ – ೨

ಪ್ರಕಾಶಕರು :
ಶ್ರೀ ಎನ್. ಕೆ. ಜೋಗಳೇಕರ
ಸಿ, ೨೭, ತೇಜಸ್ವಿ ನಗರ, ಕಲಘಟಗಿ ರೋಡ,
ಧಾರವಾಡ – ೫೮೦ ೦೦೭.

ಪ್ರಥಮ ಮುದ್ರಣ : ೧೯೬೬
ದ್ವಿತೀಯ ಮುದ್ರಣ : ೧೯೮೧



ಬೆಲೆ : ನಾಲ್ಕು ರೂಪಾಯಿ

ಮುದ್ರಕರು :
ಶ್ರೀ ಆರ್. ಬಿ. ವೈದ್ಯ
ಸಾಧನಾ ಪ್ರೆಸ್, ಬೆಳಗಾಂವ ರೋಡ,
ಧಾರವಾಡ – ೫೮೦ ೦೦೮.

# ಅ ರ್ಪ ಣೆ

ಕನ್ನಡ ಪತ್ರಿಕೋದ್ಯಮದಲ್ಲಿ ನಾವೀನ್ಯತೆಯನ್ನು ಸಾಧಿಸಲು
ಅವಿಶ್ರಾಂತವಾಗಿ ಶ್ರಮಿಸುತ್ತಿರುವ,
ನುರಿತ ಪತ್ರಿಕೋದ್ಯಮಿಗಳೂ, ವಿಚಾರ-ಕ್ರಾಂತಿಪ್ರಿಯರೂ,
'ಸಂಯುಕ್ತ ಕರ್ನಾಟಕ'ದ ಸಹಾಯಕ ಸಂಪಾದಕರೂ.
ನನ್ನ ಆತ್ಮೀಯ ಮಿತ್ರರೂ ಆದ

**ಶ್ರೀ ಮತ್ತೀಹಳ್ಳಿ ನಾಗರಾಜರಾವ**

ಇವರಿಗೆ —

—ಲೇಖಕ

# ನನ್ನ ನುಡಿ

ಜ್ಯೋತಿಷಿಯು ನೌಕರನೋ, ಸೇವಕನೋ ? ಸಮಾಜ ಕಾರ್ಯಕರ್ತನೋ, ವೃತ್ತಿಜೀವಿಯೋ?.. ಸ್ವತಂತ್ರ ವ್ಯಕ್ತಿಯೋ, ವ್ಯಕ್ತಿಗಳ ಮಾರ್ಗದರ್ಶಿಯೋ ?......... ಮುಂತಾದ ಪ್ರಶ್ನೆಗಳ ಜಾಲದಲ್ಲಿ ಸಿಲುಕಿ, ಪರಿಹಾರವನ್ನು ಪಡೆಯದೇ ನಿರ್ವಿಣ್ಣರಾಗುವ ಸಂಭವಗಳು ಉಂಟಾಗುತ್ತವೆ. ಆದರೆ ಜ್ಯೋತಿಷಿಯ ಕೃತಿಯಲ್ಲಿ ಎಲ್ಲ ಹಂತಗಳ ಸಮ್ಮಿಲನವಿರುತ್ತದೆ. ಅವನು ಶಾಸ್ತ್ರದ ನೌಕರನು; ಮಾನವಕೋಟಿಯ ಸೇವಕನು: ತ್ಯಾಗಪ್ರವೃತ್ತಿ ಪಡೆದ ಸಮಾಜ ಕಾರ್ಯಕರ್ತನು; ತನ್ನ ಜೀವನವನ್ನೇ ಈ ಶಾಸ್ತ್ರಕ್ಕೆ ಮೀಸಲಿಟ್ಟ ವೃತ್ತಿಜೀವಿ; ಯಾರ ಲಂಗು ಲಗಾಮುಗಳಿಗೂ ಸಿಲುಕದ ಸ್ವತಂತ್ರ, ಆದರೆ ಆದರ್ಶ ವ್ಯಕ್ತಿತ್ವ ಪಡೆದ ವ್ಯಕ್ತಿ; ದುಃಖಿ ಪೀಡಿತರಿಗೆ ಸಮಾಧಾನ ಪರಿಹಾರಗಳನ್ನು ಒದಗಿಸುವ ಮಾರ್ಗದರ್ಶಿ. ಇಷ್ಟಿದ್ದರೂ ಅವನಲ್ಲಿ ಒಂದು ಮುಖ್ಯ ಗುಣ ಬೇಕು. ಸಮಾಜದ ತೊಡಕುಗಳನ್ನು, ವ್ಯಕ್ತಿಯ ಸಮಸ್ಯೆಗಳನ್ನು ಜ್ಯೋತಿಷ್ಯ ಶಾಸ್ತ್ರದ ಆಧಾರದ ಮೇಲೆ ಬಗೆಹರಿಸುವಾಗ ಅಧಿಕಾರವಾಣಿಯಿಂದ ಪರಿಹಾರ ನೀಡುವದು. ಆದ್ದರಿಂದ ಈ ಹೊತ್ತಿಗೆಯನ್ನು "ಅಧಿಕಾರೀ ಜ್ಯೋತಿಷಿ" ಎಂದು ಕರೆದಿದ್ದೇನೆ. ಇದರರ್ಥ ಅವನು ಇತರ ಅಧಿಕಾರಿಗಳಂತೆ ಅಧಿಕಾರ ಚಲಾಯಿಸುವ ಅಧಿಕಾರ ಲಾಲಸಿಯಲ್ಲ-ತನ್ನ ಪರಿಹಾರಗಳಲ್ಲಿ ಆತ್ಮವಿಶ್ವಾಸವನ್ನು, ಸಂಪೂರ್ಣ ನಂಬಿಕೆಯನ್ನು ತಾಳಿ ಅದನ್ನು ತನ್ನ ಪೃಚ್ಛಕರಿಗೆ ಮನಮುಟ್ಟುವಂತೆ ದೃಢನಿರ್ಧಾರವುಳ್ಳವನು.

ಎಲ್ಲ ವೃತ್ತಿಜೀವಿಗಳಿಗೂ ಮಾರ್ಗದರ್ಶಕ ಗ್ರಂಥಗಳು ಲಭಿಸುತ್ತವೆ. ಡಾಕ್ಟರರು, ಇಂಜಿನಿಯರುಗಳು, ವಕೀಲರು, ಮುಂತಾಗಿ ವೃತ್ತಿಜೀವಿಗಳು ತಮ್ಮ ವೈಯಕ್ತಿಕ ಪ್ರವೃತ್ತಿಯನ್ನು ಹೇಗೆ ರೂಪಿಸಿಕೊಳ್ಳಬೇಕು, ಯಾವ ಮನೋಧರ್ಮವನ್ನು ರೂಢಿಸಿಕೊಳ್ಳಬೇಕು, ಹೇಗೆ ವರ್ತಿಸಬೇಕು ಮುಂತಾದಿ ತಿಳಿಸಿ ಹೇಳುವ ಸಾಹಿತ್ಯ ಲಭಿಸುತ್ತದೆ. ಆದರೆ ಜ್ಯೋತಿಷಿಯ ವೃತ್ತಿ ಎಷ್ಟು ಕಷ್ಟಕರವಾದದ್ದು. ಅವನ ಮನೋಧರ್ಮವು ಹೇಗಿರಬೇಕು, ಯಾವ

ವಿದ್ಯಾರ್ಹತೆ, ಗುಣಗಳು ಪಡೆದವರು ಜ್ಯೋತಿಷಿಗಳಾಗಬಹುದು ಮುಂತಾದ ಮನೋಧರ್ಮದ ಬಗ್ಗೆ ಹಾಗೂ ವೃತ್ತಿಧರ್ಮದ ಬಗ್ಗೆ ಸೂಚಿಸಿ, ಮಾರ್ಗದರ್ಶನ ನೀಡುವ ಗ್ರಂಥಗಳು ನಮ್ಮಲ್ಲಿ ವಿರಳ. ಈ ಕೊರತೆಯನ್ನು ನೀಗಿಸುವ ಮಾರ್ಗದಲ್ಲಿ ಈ ಪುಸ್ತಕವು ಒಂದು ಪ್ರಯತ್ನ. ಇದು 'ಅಧಿಕಾರೀ ಜ್ಯೋತಿಷಿ'ಯ ಮೊದಲನೆಯ ಭಾಗ. ಇದರಲ್ಲಿ ವಿಷಯಪ್ರವೇಶ ಮಾತ್ರ ಮಾಡಿ, ಸಾಮಾನ್ಯವಾಗಿ ಜ್ಯೋತಿಷಿಗಳಿಗೆ ತಮ್ಮ ದೈನಂದಿನ ಕಾರ್ಯದಲ್ಲಿ ಬಂದೊದಗುವ ಸಮಸ್ಯೆಗಳು, ತಾವು ಎದುರಿಸಬೇಕಾದ ನಾನಾ ತರದ ಪೃಚ್ಛಕರು. ಮುಂತಾಗಿ ಚರ್ಚಿಸಲಾಗಿದೆ. ಆಧುನಿಕ ಯುಗದಲ್ಲಿ ಜ್ಯೋತಿಷ್ಯ ಶಾಸ್ತ್ರವು ಎಷ್ಟು ಕ್ಲಿಷ್ಟವಾಗುತ್ತಿದೆ. ನವೀನ ಜ್ಯೋತಿಷಿಕಾರರು 'ಆಧಾರ....ಆಧಾರ'ವೆಂಬ ಪುರಾತನ ಅವಶೇಷದ ಭೂತ ಪೀಡಿತರಾಗದೆ ನವ್ಯ ಸಮಸ್ಯೆಗಳಿಗೆ ತರ್ಕ ನಿಯಮಗಳನ್ನು ಅನುಭವದ ಆಧಾರದ ಮೇಲೆ ರಚಿಸಿ ಪ್ರಗತಿ ಸಾಧಿಸಬೇಕೆಂಬ ಕರೆ ಈ ಪುಸ್ತಕದಲ್ಲಿ ಅಡಗಿದೆ.

ಇದರ ಎರಡನೆಯ ಹಾಗೂ ಮೂರನೆಯ ಭಾಗಗಳನ್ನು ಬರೆಯುವ ಸದಿಚ್ಛೆ ನನಗಿದೆ. ಈ ಭಾಗಗಳಲ್ಲಿ ಶಾಸ್ತ್ರದ ಹಾಗೂ ಅನುಭವದ ಆಧಾರಗಳ ಮೇಲೆ ಹೊಸ ಸೂತ್ರಗಳನ್ನು, ಉಲ್ಲೇಖಗಳನ್ನು ರಚಿಸಿ ಅತಿ ಸೂಕ್ಷ್ಮ ಹಾಗೂ ಕ್ಲಿಷ್ಟ ಸಮಸ್ಯೆಗಳನ್ನೂ ಹೇಗೆ ಬಗೆಹರಿಸಬಹುದೆಂದು ಉದಾಹರಣೆಗಳ ಸಮೇತ ಬರೆಯಬೇಕೆಂದಿದ್ದೇನೆ.

ಈ ಪುಸ್ತಕವು ಈ ರೂಪತಾಳಲು ನನ್ನ ಅನೇಕ ಮಿತ್ರರು, ಅಭಿಮಾನಿಗಳು ನೆರವಾಗಿದ್ದಾರೆ. ಕರಡು ಪ್ರತಿಯನ್ನು ತಯಾರು ಮಾಡುವಲ್ಲಿ ಶ್ರೀಯುತರಾದ ಹೆಚ್. ಎಲ್. ಸೂರ್ಯನಾರಾಯಣರಾವ್. ಕೆ. ಎಸ್. ಶರ್ಮಾ. ಮನೋಹರ ಕಾಳೆ. ಹಾಗು ಮನೋಹರ ಘಾಣೇಕರ ಶಹಾಜಿ ಶಿಂಧೆ ಇವರುಗಳಿಗೂ ಮುದ್ರಣದೋಷಗಳನ್ನು ಜಾಗರೂಕತೆಯಿಂದ ಪರಿಶೀಲಿಸಿ ತಿದ್ದಲು ಸಹಕರಿಸಿದ ಶ್ರೀ ಭೀಮಪ್ರಸಾದ ಪಾಂಡೆ ಇವರಿಗೆ ನನ್ನ ಕೃತಜ್ಞತೆಗಳು. ಶ್ರೀ ಜಿ.ಕೆ ಮೂರ್ತಿಯವರು ಅಂದವಾದ ಮುಖಚಿತ್ರ ತೆಗೆದು ಅನುವಾಗಿದ್ದರೆ ಪಡಿಯಚ್ಚನ್ನು ತಯಾರಿಸಿ ಶ್ರೀಕೃಷ್ಣ ಪೋತದಾರರೂ ಸಹಕರಿಸಿದ್ದಾರೆ, ಸಕಾಲದಲ್ಲಿ ಅಂದವಾಗಿ ಮುದ್ರಿಸಿಕೊಟ್ಟ ಶ್ರೀ ಘಾಣೇಕರ ಬಂಧುಗಳಿಗೂ ನಾನು ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ಸಂಯುಕ್ತ ಕರ್ನಾಟಕದ ದಿನಪತ್ರಿಕೆಯ ಸಹಸಂಪಾದಕರಾಗಿ ಕನ್ನಡ ಪತ್ರಿಕೋದ್ಯಮದಲ್ಲಿ ವಿಚಾರಕ್ರಾಂತಿ ಎಬ್ಬಿಸಲು ತೆರೆಯ ಮರೆಯಲ್ಲಿ ನಿರಂತರವಾಗಿ ಶ್ರಮಿಸುತ್ತಿರುವ ಉತ್ಸಾಹಿಗಳು, ಆತ್ಮೀಯರೂ ಆದ ಶ್ರೀ ಮತ್ತಿಹಳ್ಳಿ ನಾಗರಾಜರಾಯರು ಈ ಕೃತಿಯನ್ನು ಅರ್ಪಣೆಯಾಗಿ ಸ್ವೀಕರಿಸಲು ಒಪ್ಪಿಗೆ ನೀಡಿದ್ದಾರೆ. ಅವರಿಗೆ ನಾನು ಅತ್ಯಂತ ಋಣಿಯಾಗಿದ್ದೇನೆ.

ನನ್ನ ಫಲಜ್ಯೋತಿಷ್ಯ ಜ್ಯೋತಿರ್ಮಾಲೆಯಲ್ಲಿ 'ಅಧಿಕಾರೀ ಜ್ಯೋತಿಷಿ'ಯು ಎಂಟನೆಯ ನಕ್ಷತ್ರವಾಗಿ ಬೆಳಕು ಕಾಣುತ್ತಿದೆ. ಇದನ್ನು ಪ್ರಿಯ ಓದುಗರು ಆದರದಿಂದ ಬರಮಾಡಿಕೊಳ್ಳುವಿರೆಂದು ಆಶಿಸುತ್ತೇನೆ.

ಧಾರವಾಡ
೧-೧-೧೯೬೬ — ಎನ್. ಕೆ. ಜೋಗಳೇಕರ



## ದ್ವಿತಿಯಾವೃತ್ತಿಯನ್ನು ಕುರಿತು

"ಅಧಿಕಾರಿ ಜ್ಯೋತಿಷಿ" ಪುಸ್ತಕದ ಪ್ರಥಮ ಮುದ್ರಣದ ಪ್ರತಿಗಳು ಮುಗಿದು ಆರು ವರುಷಗಳಾಗಿದ್ದು, ಅನೇಕ ಜನರಿಂದ ಹೆಚ್ಚಿನ ಪ್ರತಿಗಳಿಗೆ ಬೇಡಿಕೆ ಬಂದಿದ್ದರೂ ಸಹ ಈ ವರೆಗೆ ಪುನರ್‌ಮುದ್ರಣ ಕೈಕೊಳ್ಳಲು ಸಾಧ್ಯವಾಗಿರಲಿಲ್ಲ. ಆದರೆ ಸಾಧನಾ ಮುದ್ರಣಾಲಯದ ಒಡೆಯರಾದ ಶ್ರೀ ಆರ್. ಬಿ. ವೈದ್ಯರ ಸಹಕಾರದಿಂದ ಇದೀಗ ಪ್ರಕಟಿಸಲು ಸಾಧ್ಯವಾಯಿತು. ಅದಕ್ಕಾಗಿ ಅವರಿಗೆ ಕೃತಜ್ಞತೆ ಸಲ್ಲಿಸುತ್ತೇನೆ,

೧೭-೧-೧೯೮೧ — ಎನ್. ಕೆ. ಜೋಗಳೇಕರ
ತೇಜಸ್ವಿ ನಗರ, ಧಾರವಾಡ-೨

ಶ್ರೀ

೧

# ಪೃಚ್ಛಕರಲ್ಲಿಯ ಪ್ರಕಾರಗಳು

ಫಲಜ್ಯೋತಿಷ್ಯವನ್ನು ಹೇಳುವ ಫಲಜ್ಯೋತಿಷಿಗಳಿಗೆ ಪೃಚ್ಛಕರು ಪ್ರಶ್ನಿಸುವ ಪ್ರತಿಯೊಂದು ಪ್ರಶ್ನೆಗೂ ಪರಿಹಾರಕಾರಕವಾದ ಸಮರ್ಪಕ ಉತ್ತರವನ್ನು ಕೂಡಲೇ ಬೇಕಾಗುತ್ತಿದ್ದರೂ ಒಮ್ಮೊಮ್ಮೆ ಈ ಪೃಚ್ಛಕರ ಸ್ವಭಾವ, ನಡೆನುಡಿಗಳು ಎಂತಹವರನ್ನಾದರೂ ಬೇಸರಗೊಳಿಸಿ ತಾಳ್ಮೆಗೆಡಿಸುತ್ತವೆ. ಇಂತಹವರೊಡನೆ ಜ್ಯೋತಿಷಿ ಹೇಗೆ ನಡೆದುಕೊಳ್ಳಬೇಕು. ಎಂಬುದೇ ಪ್ರಸ್ತುತ ಪ್ರಕರಣದ ಉದ್ದೇಶವಾಗಿದೆ.

ಸಾಮಾನ್ಯವಾಗಿ ನಮ್ಮ ಅನುಭವದಲ್ಲಿ ಬಂದ ಪ್ರಕಾರ ಪೃಚ್ಛಕರಲ್ಲಿ ೧೦ ರೀತಿಯವರಿರುತ್ತಾರೆ.

## ೧) ಆಷಾಢಭೂತಿ ಪೃಚ್ಛಕರು

ಈ ಗುಂಪಿನವರು ಸಾಮಾನ್ಯವಾಗಿ ಸುಶಿಕ್ಷಿತರಿದ್ದು ಜ್ಯೋತಿಷ್ಯದಲ್ಲಿ ನಂಬಿಕೆ ಇಲ್ಲ ಎನ್ನುವಂತೆ ನಟಿಸಿ ಸ್ನೇಹಿತರ ಸಲಹೆಯಿಂದಾಗಲೀ, ಅಂತರಿಕ ಒತ್ತಡದಿಂದಾಗಲೀ ಪ್ರಯತ್ನಗಳಲ್ಲಿಯ ನಿಷ್ಫಲಗಳಿಂದಾಗಲೀ, ಜ್ಯೋತಿಷಿಗಳ ಬಳಿಗೆ ಬರುವರು. ಆದರೆ ಅವರ ಅಂತರ್ಯದಲ್ಲಿ ತಮಗೆ ತಿಳಿದೋ ಅಥವಾ ತಿಳಿಯದೆಯೋ ಜ್ಯೋತಿಷ್ಯ ಕೇಳುವ ಹಂಬಲ ಇದ್ದೇ ಇರುವದು. ಇದಕ್ಕೆ ಕಾರಣ ಇನ್ನೊಂದು ಸಹ ಇದೆ. ಅವರಿಗೆ ತಮ್ಮ ಪ್ರಯತ್ನಗಳಲ್ಲಿ ದೊರೆತ ಅಯಶಸ್ಸಿನಿಂದಾಗಿ ಇದೂ ಒಂದು ಪ್ರಯತ್ನ (ಜ್ಯೋತಿಷ್ಯ ವಿಚಾರಣೆ) ಎಂದು ತಿಳಿದು ಬರುವರು. ಇಂಥವರು ತಮ್ಮ ಪ್ರಶ್ನೆ, ಸಮಸ್ಯೆಗಳನ್ನು ಪ್ರಾಂಜಲ ಮನಸ್ಸಿನಿಂದ ನೇರವಾಗಿ ಕೇಳದೇ ಜ್ಯೋತಿಷ್ಯದಲ್ಲಿಯ ತಮ್ಮ ಅಪನಂಬಿಕೆಯ ರಾಗದಿಂದಲೇ " You see Mr. Jogalekar, I have no faith or belief in astrology but my friends are insisting me to see you and I hnve heard about you" ಎಂದು ಆರಂಭಿಸಿ, ಇಂಗ್ಲೀಷ ಭಾಷೆಯಲ್ಲಿಯ ತಮ್ಮ ಮೋಹವನ್ನು ವ್ಯಕ್ತ ಪಡಿಸುವರು. ಪ್ರಾದೇಶಿಕ ಭಾಷೆ ಮಾತೃಭಾಷೆಯಲ್ಲಿ ಮಾತನಾಡುವದೆಂದರೆ ಗೌಣ ಎಂದು ತಿಳಿಯುವರು.

ಇದಕ್ಕೆ ಕಾರಣ ತನಗೆ ಜ್ಯೋತಿಷ್ಯದಲ್ಲಿ ನಂಬಿಕೆ ಇಲ್ಲಾ ಎಂದು ನಟಿಸಿದರೆ ಜ್ಯೋತಿಷಿಯು ಅವನನ್ನು ಜ್ಯೋತಿಷ್ಯದಲ್ಲಿ ನಂಬುವಂತೆ, ಮನಗಾಣುವಂತೆ ಆ ಶಾಸ್ತ್ರವನ್ನು ವಿವರಿಸಬೇಕೆಂಬ ಭಾವನೆ, ನಿರೀಕ್ಷೆ ಅವನಲ್ಲಿರುತ್ತದೆ.

ಇಂತಹ ಸಂದರ್ಭದಲ್ಲಿ ಜ್ಯೋತಿಷಿಗೆ ಸಮರ್ಪಕ ಉತ್ತರವನ್ನೀಯಲು ಭಾಷಾ ಸಮಸ್ಯೆ ಉಂಟಾಗಬಾರದು. ಜ್ಯೋತಿಷಿಗೆ ಹೆಚ್ಚೆಚ್ಚು ಭಾಷೆಗಳು ತಿಳಿದಷ್ಟು ಉತ್ತಮವು. ಆ ಭಾಷೆಗಳಲ್ಲಿ ಅವನಿಗೆ ಪ್ರಭುತ್ವ ಇಲ್ಲವೆ ಪ್ರೌಢಿಮೆ ಇರಬೇಕೆಂದಿಲ್ಲ. ಆದರೂ ಸಂಭಾಷಣೆಗೆ ಬೇಕಾಗುವಷ್ಟು ಭಾಷಾಜ್ಞಾನ ಇದ್ದರೆ ಸಾಕು. ಈ ವರ್ಗದವರಿಗೆ ಉತ್ತರ ಕೊಡುವಾಗ ಮತ್ತೊಂದು ಸಮಸ್ಯೆ ಸಹ ಏಳುತ್ತದೆ. ಅದೇನಂದರೆ ಅವರ ಬಳಿ ಸರಿಯಾದ ಜಾತಕ ಸಹ ಇಲ್ಲದಿರುವದು. ಜ್ಯೋತಿಷಿಗಳು ಅವರು ಹೇಳಿದ ಜನ್ಮದಿನ-ವೇಳೆಗಳಿಂದ ಜಾತಕವನ್ನು ತೆಗೆದು ಮುಖ–ಹಸ್ತಗಳನ್ನು ಪರೀಕ್ಷಿಸಿ, ಶ್ರಮವಹಿಸಿ ಉತ್ತರ ಕೊಡಬೇಕಾಗುವದು. ಇಷ್ಟು ಪರಿಶ್ರಮ ವಹಿಸಿದಾಗ್ಯೂ ಅವರಿಂದ ದೊರೆಯುವ ಸಂಭಾವನೆ "THANKS" ಇಂತಹವರಿಗೆ ಕೇವಲ ಅವರ ಸಮಸ್ಯೆಗಳಿಗೆ ಉತ್ತರ ಕೊಡಬೇಕೆ ಹೊರತು ಜ್ಯೋತಿಷ್ಯ ಶಾಸ್ತ್ರದ ವಿವರಣೆ ನೀಡಕೂಡದು.

೨) **ಜ್ಯೋತಿಷ್ಯ ಫಲ ನಿರಾಕರಿಗಳು—**

ಜ್ಯೋತಿಷಿಗಳಿಗೆ ತಾವು ನೀಡುವ ಶುಲ್ಕ ದರದ ಮೇಲೆಯೇ ತಮಗೆ ದೊರೆಯುವ ಜ್ಯೋತಿಷ್ಯ ಫಲ ಅವಲಂಬಿಸಿದೆ ಎಂಬ ಮನೋಭಾವದಿಂದ ವರ್ತಿಸುವ ವ್ಯಕ್ತಿಕರು ಈ ವರ್ಗದಲ್ಲಿರುತ್ತಾರೆ.

ಸಾಮಾನ್ಯವಾಗಿ ಇವರು ಮೊದಲು ಪ್ರಶ್ನೆ, ಸಮಸ್ಯೆಗಳನ್ನು ವಿಚಾರಿಸದೇ ರೂಪಾಯಿ ನೋಟುಗಳನ್ನು ಜ್ಯೋತಿಷಿಗಳ ಮುಂದಿಟ್ಟು "ನಮಗೆ ಜ್ಯೋತಿಷ್ಯ ಹೇಳಿ" ಎಂದು ಆಜ್ಞಾಪಿಸುವರು.

ಜ್ಯೋತಿಷಿಗಳನ್ನು ಖರೀದಿ ಮಾಡುವ ಮನೋಭಾವವುಳ್ಳ ಇಂತಹವರಿಗೆ ವಿಷಾದದಿಂದ ಹೇಳಬೇಕಾದ ಒಂದು ಸಂಗತಿಯೆಂದರೆ "ಹಣದಿಂದ ಹಣೆ ಬರಹವನ್ನು ಹೆಚ್ಚು ಕಡಿಮೆ ಮಾಡುವದು ಯಾರಿಂದಲೂ ಸಾಧ್ಯವಿಲ್ಲ."

ಎಂಬುದು. ಲಕ್ಷ್ಮೀಗೆಜ್ಜೆಯ ತಾಳಕ್ಕೂ ಗ್ರಹಗತಿಗೂ ಮೇಳವಿಲ್ಲ ಎಂಬು ದನ್ನು ಇವರು ಕಂಡುಕೊಳ್ಳಬೇಕು. ಏಕೆಂದರೆ ೫೦ ನಯೆ ಪೈಸೆ ಕೊಟ್ಟವ ನಿಗೆ ಸಾಡೇಸಾತಿ ಕಾಡುತ್ತದೆ. ೫೦ ರೂ. ಕೊಟ್ಟವರಿಗೆ ಸಾಡೇಸಾತಿ ಕಾಡುವ ದಿಲ್ಲ ಎಂಬುದಾಗಿ ಯಾವ ಜ್ಯೋತಿಷಿಯೂ ಎಲ್ಲಿಯೂ ಹೇಳಲಾರನು.

ಇಂತವರೊಡನೆ ವ್ಯವಹರಿಸುವಾಗ ಜ್ಯೋತಿಷಿಗೆ "ಜ್ಯೋತಿಷ್ಯ ವ್ಯಾಪಾ ರವಲ್ಲ" "ತಾನು ಮಾಡುತ್ತಿರುವದು ಪರೋಪಕಾರ, ಸಮಾಜಸೇವೆ, ಎಂಬ ಸ್ಪಷ್ಟ ಅರಿವು ಇರಬೇಕು. ಪೃಚ್ಛಕರು ಕೊಡುವ ಹಣ ಶುಲ್ಕವಾಗಿರದೆ ದಕ್ಷಿಣೆ ಯಾಗಿರುತ್ತದೆಂಬುದು ಜ್ಯೋತಿಷಿಗೆ ಚನ್ನಾಗಿ ಮನದಟ್ಟಾಗಿರಬೇಕು.

## ೩) ಡಾಂಭಿಕ ಪೃಚ್ಛಕರು—

ಇನ್ನೂ ಕೆಲವರು ಜ್ಯೋತಿಷ್ಯದ ಗಂಧ ಗೊತ್ತಿಲ್ಲದಿದ್ದರೂ, ಗೊತ್ತಿರು ವಂತೆ ನಟಿಸುವ ಈ ವರ್ಗದವರು ಜ್ಯೋತಿಷ್ಯದಲ್ಲಿ ಪ್ರಭುತ್ವ ಪಡೆದವರಂತೆ ವರ್ತಿಸುವರು. ಉದಾಹರಣೆಗಾಗಿ, 'ನೋಡಿರಿ ಜ್ಯೋತಿಷಿಗಳೇ! ಈ ಜಾತಕ ದಲ್ಲಿ ಮಂಗಳನಿದ್ದಾನೆ, ಆ ಗ್ರಹ ಹೀಗಿದೆ, ಈ ಗ್ರಹ ಹಾಗಿದೆ' ಎಂದು ಮುಂಗಾಲ್ಪುಟಿಯಂತೆ ವರ್ತಿಸುವರು. ಚಂದ್ರ ವಕ್ರೀ ಇರುವನು. ರಾಹು ಮಾರ್ಗಿ ಇರುವನು. ರವಿ ಅಸ್ತನಿರುವನು, ಎಂದು ಹೇಳಲು ಕೂಡ ಹಿಂದೆ ಮುಂದೆ ನೋಡುವುದಿಲ್ಲ. ಏನಾದರೂ ಜ್ಯೋತಿಷ್ಯದ ಶಬ್ದ ಉಚ್ಚರಿ ಸುವರು.

ಅವರು ಹೀಗೇಕೆ ವರ್ತಿಸುವರು? ಎಂಬುದಕ್ಕೂ ಕಾರಣವಿದೆ. ತನಗೆ ಜ್ಯೋತಿಷ್ಯ ಗೊತ್ತಿರುವಂತೆ ನಟಿಸಿದರೆ, ಜ್ಯೋತಿಷಿಗಳು ಜಾತಕವನ್ನು ಸೂಕ್ಷ್ಮ ವಾಗಿಯೂ, ಆಳವಾಗಿಯೂ ಪರಿಶೀಲಿಸುವರು ಎಂಬ ಭಾವನೆ, ಕಲ್ಪನೆ ಇರುತ್ತದೆ.

ಇಂಥ ವರ್ಗದವರಿಗೆ ಅವರ ಪ್ರಶ್ನೆ ಇಲ್ಲವೆ ಸಮಸ್ಯೆಗೆ ಉತ್ತರ ಕೊಡುವ ಮೊದಲು ಅವರನ್ನು ಚೆನ್ನಾಗಿ ಪರೀಕ್ಷಿಸಬೇಕು. ಮಂಗಳ ಇದ್ದಾನೆ ಎಂದು ಹೇಳಿದ ಗೃಹಸ್ಥನಿಗೆ ಮಂಗಳನು ಎಲ್ಲಿದ್ದಾನೆ? ಹೇಗಿದ್ದಾನೆ? ಅವನ ಬಲಾ- ಬಲ ಹೇಗೆ? ಸ್ಥಾನಬಲ, ದಿಶಾಬಲ, ರಾಶಿಬಲ, ಯೋಗಕಾರಕನಿದ್ದಾನೋ ಹೇಗೆ? ಮಂಗಳನ ಅಂಶವೆಷ್ಟು? ಅವನು ಯಾವ ಸ್ಥಾನವನ್ನು ನೋಡುತ್ತಾನೆ?

ಯಾರನ್ನು ನೋಡುತ್ತಾನೆ? ಅವನನ್ನು ಯಾವ ಗ್ರಹಗಳು ನೋಡುತ್ತವೆ? ಆ ಗ್ರಹಗಳ ಬಲಾಬಲವೆಷ್ಟು? .. ಈ ಮೊದಲಾದ ಜ್ಯೋತಿಷ್ಯದ ಪಾರಿಭಾಷಿಕ ಶಬ್ದಗಳನ್ನು ಜ್ಯೋತಿಷ್ಯದ ನಿಯಮಾನಿಯಮಗಳನುಸರವಾಗಿ ಉಪಯೋಗಿಸಿ ಆತನಿಗೆ ತನ್ನ ಅಜ್ಞಾನದ ಪ್ರದರ್ಶನವಾಗುವಂತೆ ಮಾಡಬೇಕು. ಆ ಬಳಿಕ ಅವರಿಗೆ ಗೊತ್ತಿಲ್ಲದ ವಿಷಯಗಳಿಗೆ ಕೈಹಾಕಬೇಡಿರಿ ಎಂದು ಉಪದೇಶಿಸಿ ಬಳಿಕ ಅವರ ಸಮಸ್ಯೆಗೆ ಉತ್ತರಕೊಡಬೇಕು.

### ೪) ಸಂಬಂಧೀ ಪೃಚ್ಛಕರು–

ಜ್ಯೋತಿಷಿಗಳೊಡನೆ ಇರಬಹುದಾದ ತಮ್ಮ ಬಾದರಾಯಣ ಸಂಬಂಧವನ್ನು ಮನಗಾಣಿಸಿದರೆ, ಜ್ಯೋತಿಷಿಗಳು ತಮ್ಮ ಸಮಸ್ಯೆಗಳಲ್ಲಿ ಹೆಚ್ಚಿನ ಆಸ್ಥೆವಹಿಸುವರೆಂದು ನಂಬಿರುವ ಜನರ ವರ್ಗವಿದು, ಇಂತಹವರು ತಮ್ಮ ಪ್ರಶ್ನೆ. ಸಮಸ್ಯೆಗಳಿಗಿಂತ ಮೊದಲು, ತಮ್ಮ ಸಂಬಂಧ, ಪರಿಚಯ, ಕುಲಗೋತ್ರಗಳನ್ನು ವಿವರಿಸಿ ಜ್ಯೋತಿಷಿಗಳ ಮೇಲೆ ತಮ್ಮ ಸಂಬಂಧದ ಪ್ರಭಾವವನ್ನು ಬೀರಲು ಯತ್ನಿಸುವರು.

ಆದರೆ ಜ್ಯೋತಿಷಿಗೆ ಈ ಯಾವದೊಂದೂ ಕುಲಗೋತ್ರ, ಜಾತಿ.ಬಂಧು ಬಳಗವಿಲ್ಲದ ಆತ ಸ್ಥಿತಪ್ರಜ್ಞನಂತಿದ್ದು, ಅತನ ಮೇಲೆ ಯಾವ ರೀತಿಯ ವಶೀಲಿಯೂ, ಪ್ರಭಾವವೂ ಬೀರಬಾರದು. ಕೇವಲ ಜಾತಕ ಹಾಗೂ ಆದರಲ್ಲಿಯ ಗ್ರಹಗತಿ, ಗ್ರಹಮಾನ ಇವೇ ಅವನ ಮಾರ್ಗದರ್ಶಿಗಳು. ಏಕೆಂದರೆ ಅನೇಕ ಸಂದರ್ಭದಲ್ಲಿ ಪ್ರಭಾವಕ್ಕೆ ಒಳಗಾಗಿ ವರ್ತಿಸಿದ ಭವಿಷ್ಯವು ತಪ್ಪುವ ಸಂಭವವಿರುತ್ತದೆ.

### ೫) ಪ್ರತಿಷ್ಠಿತ ಪೃಚ್ಛಕರು....

ಈ ವರ್ಗಕ್ಕೆ ಸೇರಿದವರು ಸಾಮಾನ್ಯವಾಗಿ ಸಮಾಜದ ಗಣ್ಯವ್ಯಕ್ತಿಗಳೆನಿಸಿಕೊಂಡವರು ಇದ್ದು, ತಾವು ಜ್ಯೋತಿಷಿಗಳ ಬಳಿ ಬಂದುದು ಯಾರಿಗೂ ತಿಳಿಯಬಾರದೆಂದು ಬಯಸುವವರೂ ಇರುವರು. ಇವರು ತಮ್ಮ ಸಮಸ್ಯೆಗಳಿಗಿಂತ ಪೂರ್ವದಲ್ಲಿ ತಾವು ಬಂದ ವಿಷಯವನ್ನು ಯಾರಿಗೂ ಹೇಳಬೇಡಿರಿ ಎಂಬ ರಾಗದಿಂದಲೇ ತಮ್ಮ ಸಮಸ್ಯೆಗಳನ್ನಿಡುವರು.

ಗೌಪ್ಯವನ್ನು ಕಾಪಾಡುವುದು ಜ್ಯೋತಿಷ್ಯದ ಧರ್ಮವೂ ಜ್ಯೋತಿಷಿಗಳ ಕರ್ತವ್ಯವೂ ಇರುತ್ತದೆ. ಮತ್ತು ಒಬ್ಬ ಪ್ರಶ್ನಕನು ಕೇಳಿದ ವಿಷಯವನ್ನು ಬೇರಾರಿಗೂ ಹೇಳಕೂಡದು ಎಂಬ ತತ್ವವನ್ನು ಒಪ್ಪಲೇಬೇಕು. ಹಾಗೂ ಪಾಲಿಸಲೇಬೇಕು. ಆದರೆ ಈ ಪ್ರತಿಷ್ಠಿತ ವ್ಯಕ್ತಿಗಳ ಕೇಳಿಕೆಯೇ ಬೇರೆ ಇರುತ್ತದೆ, ಅವರ ಗೌಪ್ಯದ ಕಾರಣವೂ ಬೇರೆ ಇರುತ್ತದೆ.

ತಾನು ಜ್ಯೋತಿಷ್ಯವನ್ನು ನಂಬುವುದಿಲ್ಲವೆಂದೂ, ಜ್ಯೋತಿಷಿಗಳ ಬಳಿಗೆ ಹೋಗುವುದಿಲ್ಲವೆಂದೂ ಇತರರ ಎದುರಿಗೆ ಢಂಗುರ, ಟಾಂ ಟಾಂ, ಹೊಡೆದ ತಮ್ಮ ಘೋಷಣೆ ಆಗಬಾರದೆಂದೇ ಅವರ ಬಯಕೆ ಇರುತ್ತದೆ. ಸುರಾ ಪಾನವನ್ನಾದರೂ ಮಾಡಬಹುದು, ವ್ಯಭಿಚಾರಕ್ಕಾದರೂ ಇಳಿಯಬಹುದು. ಸುರಾಪಾನ ಮತ್ತು ವ್ಯಭಿಚಾರಕ್ಕೆ ಬಳಿಯಾದ ಸಂಗತಿಗಳು ಬಹಿರಂಗವಾದರೂ ಅಡ್ಡಿಯಿಲ್ಲ, ಆದರೆ ಜ್ಯೋತಿಷಿಗಳ ಬಳಿಗೆ ಹೋದ ಸಂಗತಿ ಮಾತ್ರ ಬಯಲಾಗಬಾರದು.

ತನಗೆ ವಿಶ್ವಾಸವಿಲ್ಲದಿದ್ದರೆ ಬಿಟ್ಟುಬಿಡಬೇಕು. ಈ ಆತ್ಮವಂಚನೆ ಹಾಗೂ ಪರವಂಚನೆ ಏಕೆ ? ಆದುದರಿಂದ ಇಂಥ ವರ್ಗದವರೊಂದಿಗೆ ವರ್ತಿಸುವಾಗ ಜಾಗರೂಕತೆಯಿಂದ ಇರಬೇಕು. ಏಕೆಂದರೆ ಇವರು ಪ್ರತಿಷ್ಠಿತರು ! ಅವರನ್ನು ಎದುರು ಹಾಕಿಕೊಳ್ಳಲೂ ಬಾರದು, ನಿರ್ಲಕ್ಷಿಸಲೂ ಬಾರದು, ಅತಿಯಾಗಿ ಅವರ ತಾಳಕ್ಕೆ ತಕ್ಕಂತೆ ಕುಣಿಯಲೂ ಬಾರದು. ಆದರೆ ಒಂದು ಸಂಗತಿ ಮಾತ್ರ ನಿಜ, ಪ್ರತಿಷ್ಠಿತರು ಏಕಾಂತದಲ್ಲಿ ಕೇಳುತ್ತಿದ್ದರೆ. ಇತರರು ಲೋಕಾಂತ ದಲ್ಲಿ ಕೇಳುತ್ತಾರೆ. ಇಷ್ಟೇ ಭೇದ.

## ೬) ಆಗಂತುಕ ಪ್ರಶ್ನಕರು :

ಕುದುರೆ ಕಂಡರೆ ಕಾಲುನೋವು ಎಂಬಂತೆ ಅನೇಕ ಜನರಿಗೆ ಜ್ಯೋತಿಷಿ ಗಳನ್ನು ಕಂಡಕೂಡಲೇ ಸಮಸ್ಯೆಗಳು ಉದ್ಭವಿಸುತ್ತವೆ. ಇಂತಹವರಿಗೆ ಸ್ಥಳ, ಕಾಲ, ದೇಶ, ವರ್ತಮಾನಗಳೆಂಬುದೇ ಇಲ್ಲ. ರಸ್ತೆಯಲ್ಲಿಯೇ ಇರಲಿ, ಗುಡಿ ಗುಂಡಾರಗಳಲ್ಲಿಯೇ ಇರಲಿ, ಬಸ್ಸು, ರೈಲಿನಲ್ಲಿರಲಿ, ಅಂಗಡಿ-ಚಿತ್ರಮಂದಿರ ಗಳಲ್ಲಿಯೇ ಇರಲಿ, ಎಲ್ಲಿ ಅಂದರಲ್ಲಿ ಪ್ರಶ್ನೆ ಕೇಳುವರು. ಇಂತಹವರಿಗೆ ತಮ್ಮ

ಸಮಸ್ಯೆಗಳು ಅದುವರೆಗೂ ಮರೆತಿದ್ದು ಜ್ಯೋತಿಷಿಗಳನ್ನು ಕಂಡ ಕೂಡಲೇ ಮತ್ತೆ ನೆನಪಿಗೆ ಬರುವವು.

ಇಂತಹರಿಗೆ ಪ್ರಶ್ನೆಗಳನ್ನು ತತ್‌ಕ್ಷಣ ಅಲ್ಲಿಯೇ ಅವಸರಬಿದ್ದು ಬಗೆ ಹರಿಸುವ ಗೋಜಿಗೆ ಹೋಗದೇ ಒಂದು ನಿಶ್ಚಿತ ಜಾಗಕ್ಕೆ ನಿಶ್ಚಿತ ವೇಳೆಯಲ್ಲಿ ಬರಹೇಳಿ ಆನಂತರ ಅವರ ಸಮಸ್ಯೆಗಳನ್ನು ಪರಿಹರಿಸಬೇಕು. ಇದರಿಂದ ಶಾಸ್ತ್ರಕ್ಕೂ, ಶಾಸ್ತ್ರಜ್ಞನಿಗೂ ಕೂಡಿಯೇ ಗೌರವ ಬರುತ್ತದೆ. ಇದಲ್ಲದೇ ಅವರ ಕುತೂಹಲದ ಆವೇಗ ಜ್ಯೋತಿಷಿಗಳ ಗಡಿಬಿಡಿ ಹಾಗೂ ಆವಶ್ಯಕ ಸಲಕರಣೆ ಇವುಗಳು ಇಲ್ಲದಿರುವಿಕೆ ಇವುಗಳಿಂದ ಅನೇಕ ಬಾರಿ ಜ್ಯೋತಿಷ್ಯದ ಲೆಕ್ಕಾಚಾರ ತಪ್ಪಾಗುವ ಸಂಭವವಿರುವುದಲ್ಲದೇ ವರ್ತಿಸಿದ ಭವಿಷ್ಯವೂ ತಪ್ಪುವ ಸಂಭವವಿರುತ್ತದೆ.

**೭) ಪರೀಕ್ಷಕ ಹಾಗೂ ಮುಗ್ಧ (Innocent) ಪೃಚ್ಛಕರು :**

ಇನ್ನು ಕೆಲ ಪೃಚ್ಛಕರು ತಮ್ಮ ಜಾತಕ (ಕುಂಡಲಿ) ವನ್ನು ಕೊಡದೇ ರಾಶಿ, ನಕ್ಷತ್ರಗಳನ್ನು ತಿಳಿಸದೇ ಜನನ ದಿನಾಂಕ, ವೇಳೆಗಳನ್ನೂ ಕೂಡ ಹೇಳದೆ. ಹಸ್ತವನ್ನೂ ಪರೀಕ್ಷಿಸಲು ಇಚ್ಛಿಸದೇ, ತಮ್ಮ ಸಮಸ್ಯೆಗಳನ್ನು ಸಹ ಅರುಹದೇ ಜ್ಯೋತಿಷಿಗಳೇ ಎಲ್ಲವನ್ನೂ ವಿವರಿಸಬೇಕೆಂಬ ಮನೋಭಾವನೆ ಉಳ್ಳವರು ಇರುತ್ತಾರೆ.

ಜ್ಯೋತಿಷಿಗಳೇ ಎಲ್ಲವನ್ನು ವಿವರಿಸಬೇಕು. ಅವರ ಆಗಮನದಿಂದ ಅವರ ರಾಶಿ ನಕ್ಷತ್ರಗಳು ಯಾವವು ? ಅವರ ಸಮಸ್ಯೆಗಳು ಎಂತಿರಬೇಕು ? ಅವರ ಮನಸ್ಸಿನಲ್ಲಿ ಏನಿದ್ದಿರಬೇಕು ? ಎಂಬುದನ್ನೂ ಕೂಡ ವಿವರಿಸಬೇಕೆಂಬ ಅಭಿಲಾಷೆ ಉಳ್ಳವರೂ ಇರುತ್ತಾರೆ.

ಜ್ಯೋತಿಷ್ಯ ಇದೊಂದು ಶಾಸ್ತ್ರವಿದೆ. ಇದಕ್ಕೊಂದು ರೀತಿ ಇದೆ. ಇದಕ್ಕೊಂದು ಲೆಕ್ಕವಿದೆ, ಇದಕ್ಕೊಂದು ಮಿತಿ, ವ್ಯಾಪ್ತಿ ಇರುತ್ತದೆ ಎಂಬುದನ್ನೂ ಇಂತಹರು ವಿಚಾರಿಸಲಾರರು.

ಜ್ಯೋತಿಷಿಗಳೆಂದರೆ ದೇವರ ಅವತಾರ, ಜ್ಯೋತಿಷಿಗಳ ಮೈಯಲ್ಲಿ ದೇವರು ಬರುತ್ತಾನೆ ಎಂಬುದೇ ಇವರ ಕಲ್ಪನೆ, ಊಹೆ ಇರುತ್ತದೆ.

ಮುಖ ನೋಡಿದಕೂಡಲೇ ಅವರವರ ಸಮಸ್ಯೆಗಳಿಗೆ ಸಮರ್ಪಕವಾದ ಉತ್ತರವನ್ನು ಕೊಡುವ ಮಹಾಶಯರೂ ಇದ್ದಾರೆ. ಆದರೆ ಅವರು ಯೋಗಿ

ಗಳೂ ತಪಸ್ವಿಗಳೂ ಸಿದ್ಧಿಗಳು ಇರುವರೇ ವಿನಾ ಜ್ಯೋತಿಷಿಗಳಿರುವುದಿಲ್ಲ. ಎಲ್ಲ ಜ್ಯೋತಿಷಿಗಳೂ ಯೋಗಿಗಳಾಗಿರುವುದು ಸಾಧ್ಯವಿಲ್ಲ.

ಆದುದರಿಂದ ಈ ವರ್ಗದ ಜನರಿಗೆ ನೇರ ಉತ್ತರ ಕೊಡದೇ ಅವರವರ ಸಮಸ್ಯೆಗಳನ್ನೂ ಮತ್ತು ಅವರ ಜಾತಕಗಳನ್ನೂ ಬರೆಯಲು ಸಹಾಯಕ ವಾದ ಸಂಗತಿಗಳನ್ನು ತಿಳಿದುಕೊಂಡ ನಂತರ ಸಮರ್ಪಕ ಉತ್ತರವನ್ನು ಕೊಡಬೇಕು.

ಆ) ವಿಃಕಿಯುರಿಯುದ ಪೃಚ್ಛಕರು :

ಜ್ಯೋತಿಷ್ಯ ತಮ್ಮ ಪ್ರತಿಯೊಂದು ಆಗುಹೋಗುಗಳನ್ನು ಪೂರ್ವಭಾವಿ ಯಾಗಿ ತಿಳಿಸುವ ಶಾಸ್ತ್ರವಿರುವದಾದರೂ ಅದಕ್ಕೂ ಒಂದು ಮಿತಿ ಇದೆ. ಜ್ಯೋತಿಷ್ಯಕ್ಕೆ ಬಾಹಿರವಾದ ಅತೀ ಸೂಕ್ಷ್ಮಾ ಸೂಕ್ಷ್ಮಗಳಾದ ಕೆಲವೊಂದು ವಿಷಯುಗಳಿವೆ. ಇದನ್ನರಿಯದೇ ಪ್ರತಿಯೊಂದನ್ನೂ ಅತ್ಯಂತ ಸೂಕ್ಷ್ಮ ವಿಷಯ ವನ್ನೂ ಸಹ ಪ್ರಶ್ನಿಸುವ ಜನರು ಈ ವರ್ಗದಲ್ಲಿ ಬರುತ್ತಾರೆ.

ಉದಾಹರಣೆಗಾಗಿ ರೆವ್ಹಿನ್ಯೂ ಖಾತೆಯ ಕಾರಕೂನರೊಬ್ಬರು ನನ್ನ ಬಳಿ ಬಂದು ತಮಗೆ ವರ್ಗವಾಗುವ ಸಂಭವವಿದೆಯೋ ಎಂದು ಕೇಳಿದರು. ವರ್ಗವಾಗುವುದೆಂದು ತಿಳಿದಾಗ, ವರ್ಗವಾಗುವ ಕಾಲ, ಯಾವ ದಿಕ್ಕಿನ ಸ್ಥಳಕ್ಕೆ, ಎಷ್ಟು ದೂರ ಎಂದು ಕೇಳಹತ್ತಿದರು. ಇದಕ್ಕೂ ಜ್ಯೋತಿಷ್ಯದ ಆಧಾರದ ಮೇಲೆ ಉತ್ತರವಿತ್ತೆ. ಅವರು ಮುಂದುವರಿದು ಯಾವ ಕಚೇರಿಗೆ? ತಹಸೀ ಲ್ದಾರರ ಕಚೇರಿಗೋ ? ಪ್ರಾಂತ ಅಧೀಸರರ ಕಚೇರಿಗೋ? ಡೆಪ್ಯೂಟಿ ಕಮೀಶ ನರರ ಕಚೇರಿಗೋ ? ಬಿ.ಡಿ.ಓ.ರ ಕಚೇರಿಗೋ ? ಕಮೀಶನರರ ಕಚೇರಿಗೋ ? ಅಥವಾ ಎಲ್ಲಿಯಾದರೂ ಕೈಗಡ ( Deputation or lent hand ) ಕಚೇರಿಗೂ ? ಈ ಮೊದಲಾಗಿ ವಿಚಾರಿಸಿದರು. ನಿಜವಾಗಿಯೂ ಇಂಥ ಪ್ರಶ್ನೆ ಗಳು ಸ್ವಲ್ಪ ತೊಡಕಿನದಾದರೂ ಅದಕ್ಕೂ ಉತ್ತರವಿತ್ತೆ. ಆದರೆ ಅದಕ್ಕೂ ತೃಪ್ತರಾಗದೇ ತಮಗೆ ಯಾವ ಟೇಬಲ್ ಸಿಗುವದು ಎಂದು ಕೇಳಿದರು. ಮಿಸಲೇನಿಯಸ್, ಕಾಗದಪತ್ರಗಳದ್ದೋ ಲೆಕ್ಕಪತ್ರಗಳದ್ದೋ ಎಂದು ತಿಳಿಯ ಬಯಸಿದರು. ಇದು ಜ್ಯೋತಿಷ್ಯಬಾಹಿರವಾದ ವಿಷಯ. ಇಲ್ಲಿಗೆ ಜ್ಯೋತಿಷ್ಯ ಮಿತಿಗೊಳ್ಳುತ್ತದೆ. ಆದರೂ ಸಹ ಅತನಿಗೆ ಉತ್ತರವಿತ್ತೆ.

ಆದರೆ ಒಂದೆರಡು ತಿಂಗಳ ನಂತರ ಅದೇ ವ್ಯಕ್ತಿ ಭೆಟ್ಟಿಯಾದಾಗ ನನ್ನ ಭವಿಷ್ಯ ತಪ್ಪಾಯಿತು ಎಂದು ನಿರ್ಭಯವಾಗಿ ಹೇಳಿದ. ನನಗೆ ಆಶ್ಚರ್ಯವಾಯಿತು. ವರ್ಗದ ಯೋಗ, ಕಾಲ, ದಿಕ್ಕು, ಸ್ಥಳ, ಅಂತರ (Distance) ನನ್ನ ನುಡಿಯಂತೆ ಆಗಿದ್ದರೂ ನನ್ನ ಭವಿಷ್ಯ ಸುಳ್ಳು! ಇದಕ್ಕೆ ಅವನು ಕಾರಣವಿತ್ತ, ನೀವು ಹೇಳಿದ "ಟೇಬಲ್" ನನಗೆ ಸಿಗಲಿಲ್ಲ.

ಇದರಂತೆಯೇ ಇನ್ನೊಂದು ಉದಾಹರಣೆ: ಒಬ್ಬ ಸರಕಾರಿ ನೌಕರನಿಗೆ ಅವರು ನಿರ್ದಿಷ್ಟ ಕಾಲದಲ್ಲಿ ಸರಕಾರಿ ನೌಕರಿ ಬಿಟ್ಟು ರಾಜಕಾರಣದಲ್ಲಿ ಪ್ರವೇಶಿಸಿ ಹೆಸರು ಗಳಿಸುವಿರಿ ಎಂದು ತಿಳಿಸಿದ್ದೆ. ಅದರಂತೆಯೇ ನಾನು ಹೇಳಿದ ಅವಧಿಗೆ ಅವರು ಸರಕಾರಿ ನೌಕರಿಯನ್ನು ಬಿಟ್ಟು ರಾಜಕಾರಣದಲ್ಲಿ ಪ್ರವೇಶಿಸಿದರು. ಮುಂದೆ ಸ್ವಲ್ಪ ಕಾಲದ ನಂತರ ಚುನಾವಣಾ ತಿಕೀಟು ದೊರೆಯುವ ಪ್ರಸಂಗ ಬಂದಾಗ ನನ್ನನ್ನು ಈ ರೀತಿ ವಿಚಾರಿಸಿದರು : ತಿಕೀಟು ದೊರೆಯುವದೋ ಇಲ್ಲವೋ? ತಿಕೀಟು ದೊರೆತರೆ ಚುನಾವಣೆಯಲ್ಲಿ ಜಯ ಸಿಗುವದೋ ಹೇಗೆ? ಲೋಕಸಭೆಗೆ ಆರಿಸಿ ಬರುವೆನೊ ಅಥವಾ ವಿಧಾನಸಭೆಗೆ ಆರಿಸಿ ಬರುವೆನೊ ಎಂದು. ಮೊದಲಿನ ಎರಡು ಪ್ರಶ್ನೆಗಳಿಗೆ ಉತ್ತರ ಕೊಡುವುದು ಸುಲಭವಿತ್ತು. ಆದರೆ ವಿಧಾನಸಭೆಗೆ ಹಾಗೂ ಲೋಕಸಭೆಗಳಲ್ಲಿ ಜ್ಯೋತಿಷ್ಯದ ಆಧಾರದ ಮೇಲೆ ತಾರತಮ್ಯ ಎಣಿಸುವದು ಕಠಿಣ. ಆದರೂ ಉತ್ತರವಿತ್ತೆ.

ಮುಂದೆ ಮತ್ತೆ ಭೆಟ್ಟಿಯಾದಾಗ ಅವರು ನನ್ನ ಭವಿಷ್ಯ ಸುಳ್ಳಾಯಿತು ಎಂದರು. ಕಾರಣ : ನಾನು ವಿಧಾನಸಭೆ ಎಂದು ತಿಳಿಸಿದ್ದೆ. ಆದರೆ ಅವರು ಲೋಕಸಭೆಗೆ ಆರಿಸಿ ಬಂದಿದ್ದರು.

ಸರಕಾರಿ ನೌಕರಿಗೆ ತಿಲಾಂಜಲಿ ಕೊಟ್ಟ ವಿಷಯ, ರಾಜಕಾರಣದಲ್ಲಿ ಪ್ರವೇಶಿಸಿದ ವಿಷಯ, ತಿಕೀಟು ದೊರೆತ ವಿಷಯ, ಚುನಾವಣೆಯಲ್ಲಿ ಜಯ ಗಳಿಸಿದ ವಿಷಯ, ರಾಜಕಾರಣದಲ್ಲಿ ಹೆಸರು ಗಳಿಸಿದ ವಿಷಯ ಇವೆಲ್ಲವೂ ನಿಜವಾಗಿ ಬಂದಿದ್ದರೂ ಅವರಿಗೆ ತೃಪ್ತಿಯಿಲ್ಲ. ಜ್ಯೋತಿಷ್ಯಬಾಹಿರ ವಿಷಯದಲ್ಲಿ ನನಗೆ ನಿರ್ಧರಿಸುವದಾಗದ ನನ್ನ ಒಂದು ಸಣ್ಣ ಸೋಲಿನ ಅರಿವು ಅವರಲ್ಲಿ ಹಿರಿದಾಗಿತ್ತು.

ಆದುದರಿಂದ ಇಂತಹ ವರ್ಗದವರಿಗೆ ಫಲಜ್ಯೋತಿಷ್ಯ ಹೇಳುವಾಗ ಜ್ಯೋತಿಷ್ಯದ ಮಿತಿಯೊಳಗೆ ಮಾತ್ರವಿದ್ದು ಅದಕ್ಕೆ ನಿಲುಕದ ವಿಷಯಗಳಲ್ಲಿ ಪೃಚ್ಛಕನ ಮನಸ್ಸನ್ನು ಸಂತೋಷಪಡಿಸುವ ಸಲುವಾಗಿ ಊಹೆ, ತರ್ಕ, ಮೊದಲಾದವುಗಳಿಂದ ಉತ್ತರ ಹೇಳುವ ಸಾಹಸಕ್ಕೆ ಕೈ ಹಾಕಬಾರದು. ಜ್ಯೋತಿಷ್ಯ ಬಾಹಿರ ವಿಷಯವನ್ನು ವಿವರಿಸುವ ಗೋಜಿಗೆ ಹೋಗಬಾರದು. ಇದರಿಂದ ಶಾಸ್ತ್ರ, ಹಾಗೂ ಶಾಸ್ತ್ರಜ್ಞರ ಬಗೆಗೆ ಅಪನಂಬಿಕೆ, ಅವಿಶ್ವಾಸ, ತಪ್ಪು ಗ್ರಹಿಕೆಗೆ ಅವಕಾಶ ಕೊಟ್ಟಂತಾಗುವದು.

೯) ಆರ್ತರು —

ಇನ್ನು ಕೆಲವರಿಗೆ ತಮ್ಮ ಪ್ರಶ್ನೆಗಳಿಗೆ ಪರಿಹಾರ, ಮಾರ್ಗದರ್ಶನ ಪಡೆಯುವದಕ್ಕಿಂತಲೂ ತಮ್ಮ ದುಃಖಗಳನ್ನು ತೋಡಿಕೊಳ್ಳುವುದೇ ಮುಖ್ಯವಿರುತ್ತದೆ. ಭವಿಷ್ಯ ಸರಿಬರಲಿ, ತಪ್ಪು ಬರಲಿ ಅದರ ಪ್ರಾಮುಖ್ಯತೆ ಅವರಿಗಿಲ್ಲ. ಆದರೆ ಅವರಾಡುವ ಮಾತನ್ನು ಆಸ್ಥೆಯಿಂದಲೂ ಶಾಂತ ಮಾನಸ್ಸಿನಿಂದಲೂ ಕೇಳಿಕೊಳ್ಳಬೇಕು. ಅವರಿಗೆ ತಮಗಿರುವ ತೊಂದರೆ, ಕಷ್ಟ, ದುಃಖಗಳನ್ನು ನಿಸ್ಸಂಕೋಚವಾಗಿ, ನಿರ್ಭಯವಾಗಿ ಮಾತನಾಡಲು ಸಾಕಷ್ಟು ಅವಕಾಶ ಕೊಡಬೇಕು. ಅವರ ದುಃಖಗಳನ್ನು ಶಾಂತರೀತಿಯಿಂದ ಕೇಳಿಕೊಳ್ಳುವದೇ ಅರ್ಧ ಭವಿಷ್ಯ ಹೇಳಿದಂತೆ, ಯಾರೊಬ್ಬ ವ್ಯಕ್ತಿಯೇ ಆಗಲಿ, ತನಗಿರುವ ಸಂಕಟ, ದುಃಖ ತೊಂದರೆಗಳನ್ನು ತಮ್ಮ ಆತ್ಮೀಯರಲ್ಲಿ ತೋಡಿಕೊಂಡರೆಯೇ ಅವರಿಗೆ ಸಮಾಧಾನವಾಗುವದು.

ಎಲ್ಲರ ಪ್ರೀತಿ, ವಿಶ್ವಾಸಗಳಿಗೆ ಪಾತ್ರವಾಗಿರುವ ಒಬ್ಬನೇ ವ್ಯಕ್ತಿ ಎಂದರೆ ಜ್ಯೋತಿಷಿಯು.

ಪತಿ ಪತ್ನಿಯರಲ್ಲಿಯ ವಿರಹದ, ವಿರಸದ, ಕಲಹದ, ಕಪಟದ, ಕಷ್ಟದ ಕಾರ್ಪಣ್ಯದ ಕಥೆಗಳನ್ನು ಆಲಿಸುವ ಒಬ್ಬನೇ ವ್ಯಕ್ತಿಯೆಂದರೆ ಜ್ಯೋತಿಷಿ.

ಅತ್ತೆ-ಸೊಸೆಯಂದಿರ ಜಗಳ, ತಂಟೆಗಳ, ಮನಸ್ತಾಪದ, ಕ್ರೌರ್ಯದ ವರ್ತನೆಗಳ ವಾರ್ತೆಗಳನ್ನೂ ಕೇಳಿಕೊಳ್ಳುವ ವ್ಯಕ್ತಿ ಜ್ಯೋತಿಷಿ. ಬಡವರ, ಬಡತನದ, ಬವಣೆಗಳಿಗೂ ದೂರುವ ದಾರಿದ್ರ್ಯದ ದುಃಖಗಳಿಗೂ ಸಮಾಧಾನಕರ, ಸಮಂಜಸ ಸಲಹೆಗಳನ್ನು ಕೊಡುವ ವ್ಯಕ್ತಿ ಜ್ಯೋತಿಷಿಯು.

ನಿರುದ್ಯೋಗಿ ಪದವೀಧರರಿಗೆ ಮಾರ್ಗದರ್ಶನ ಮಾಡುವ ವ್ಯಕ್ತಿಯೆಂದರೆ ಜ್ಯೋತಿಷಿ.

ನಿರಾಶೆ, ಅತೃಪ್ತಿ, ಜಿಗುಪ್ಸೆ, ಭಾವನಾಪರತೆ, ಕಠಿಣ ಹೃದಯ, ಅಶಾಂತಿ, ಮಾನಸಿಕ ವಿಕಾರ, ವಿವೇಕಶೂನ್ಯತೆ, ಅನೈತಿಕ ವ್ಯವಹಾರ, ಅಧಾರ್ಮಿಕ ಕೃತಿ ಇವುಗಳ ಹೊಡೆತಕ್ಕೆ ಸಿಲುಕಿದ, ಅವಿವಾಹಿತ, ವೃದ್ಧ, ಕುಮಾರಿಯರ ಮಾತನ್ನು ಶಾಂತರೀತಿಯಿಂದ ಕೇಳುವ ಹಾಗೂ ಸಂತೈಸುವ ವ್ಯಕ್ತಿ ಎಂದರೆ ಜ್ಯೋತಿಷಿಯು.

ಆದುದರಿಂದ ಇಂತಹ ವರ್ಗದ ಜನರೆದುರು ಅವರ ತೋಡಿಕೆಯಿಂದ ಆಗಬಹುದಾದ ಬೇಸರ, ಅಸಹನೆಗಳನ್ನು ತೋರಬಾರದು, ಶಾಂತರೀತಿಯಿಂದ ಅವರ ಮಾತನ್ನು ಕೇಳಿ ಅವರ ಪರಿಸ್ಥಿತಿಯ ಬಗೆಗೆ ಕನಿಕರ ತೋರಿ, ಅವರ ಬಗೆಗೆ ಆದರ ವ್ಯಕ್ತಪಡಿಸಿ, ಉತ್ತರ ನೀಡಬೇಕು.

### ೧೦) ಉಪಕಾರೀ ಪೃಚ್ಛಕರು —

ಈ ವರ್ಗದವರು ನಮ್ಮ ಬಳಿಗೆ ಪ್ರಶ್ನೆ ಕೇಳುವದು, ಅರ್ಥಾತ್ ತಮ್ಮ ಸಮಸ್ಯೆಗಳಿಗೆ ಸಮಾಧಾನ ಹಾಗೂ ಪರಿಹಾರ ಕಂಡುಕೊಳ್ಳುವುದು ಕೂಡ ನಮ್ಮ ಮೇಲೆ ಉಪಕಾರ ಮಾಡುವರೆಂಬ ರೀತಿಯಲ್ಲಿ ವರ್ತಿಸುವರು ಅವರು ತಮ್ಮ ಸಮಸ್ಯೆಗಳನ್ನು ವಿವರಿಸುವದಕ್ಕಿಂತ ಮೊದಲು ತಾವು ಕಂಡ ಅನೇಕ ಪ್ರಸಿದ್ಧ ಜ್ಯೋತಿಷಿಗಳ ಬಿರುದಾಂಕಿತ ನಾಮಾವಳಿಯನ್ನು ಉಚ್ಚರಿಸಿ. ಆದಾಗ್ಯೂ ತಮ್ಮ ಸಮಸ್ಯೆ ಬಗೆಹರಿದಿಲ್ಲವೆಂದು ಯಾವ ಜ್ಯೋತಿಷಿಯ ಭವಿಷ್ಯ ಸರಿ ಬಂದಿಲ್ಲವೆಂದು ಹೇಳಿ ಈ ಸಲ ನಿಮ್ಮ ಭವಿಷ್ಯವೂ ಸರಿಬರದಿದ್ದರೆ ತಾವು ಇನ್ನುಮೇಲೆ ಜ್ಯೋತಿಷ್ಯವನ್ನು ಕೇಳುವುದನ್ನೇ ಬಿಡುತ್ತೇನೆ ಎಂದು ಬೆದರಿಕೆ ಹಾಕುವರು.

ಇದಕ್ಕೆ ಕಾರಣ ಈ ಜನರ ಹಣೆಬರಹದಲ್ಲಿರದಿದ್ದನ್ನು ಆಶಿಸಿ ಅದಕ್ಕಾಗಿಯೇ ಹೋರಾಡುತ್ತಿದ್ದು, ಅದರ ಬಗ್ಗೆ ಯಶಸ್ಸು ಸಿಗುವುದೆಂದು ಜ್ಯೋತಿಷಿ ಹೇಳುವನೆಂಬ ನಿರೀಕ್ಷೆ ಅವನಲ್ಲಿರುವುದು. ಆದರೆ ಅವರು ಎಷ್ಟೇ ಮಂದಿ ಜ್ಯೋತಿಷಿಗಳ ಬಳಿಗೆ ಹೋದರೆ ತಾನೆ ಏನು? ಅವರ ಜಾತಕವನ್ನು ಬದಲಿಸಲು ಯಾರಿಗೂ ಶಕ್ಯವಿಲ್ಲ. ಇಲ್ಲಿ ಒಂದು ಉದಾಹರಣೆ ಉದಾಹರಿಸಿದರೆ ಈ ಶಾಸ್ತ್ರದ ಕಾಠಿಣ್ಯದ ಕಲ್ಪನೆ ಬರುವದು. ಮಿಥುನ ಲಗ್ನ, ಲಗ್ನದಲ್ಲಿ ಮಂಗಳ

ರಾಹು ಹಾಗೂ ಸಪ್ತಮದಲ್ಲಿ ಶನಿ-ಕೇತು ಮತ್ತು ಸಪ್ತಮೇಶನಾದ ಗುರು ನೀಚರಾಶಿಸ್ಥನಾಗಿ ಅಷ್ಟಮದಲ್ಲಿದ್ದು ಆ ಜಾತಕನಿಗೆ ಗೋಚರಿಯಿಂದ ಸಾಡೇಸಾತಿ ಪ್ರಾರಂಭವಾಗಿರುವ ಜಾತಕವಿದೆ ಎಂದು ಕಲ್ಪಿಸಿರಿ. ಇಲ್ಲಿ ಈ ಜಾತಕನು ಅನೇಕ ಜ್ಯೋತಿಷಿಗಳ ಬಳಿ ಹೋಗಿ ವಿವಾಹ ಹಾಗೂ ವೈವಾಹಿಕ ಜೀವನದ ಬಗ್ಗೆ ವಿಚಾರಿಸಿದರೆ ಯಾರಿಂದಲೂ ಸಮಾಧಾನಕರ ಉತ್ತರ ದೊರೆಯಲಾರದು.

ಆದುದರಿಂದ ಇಂಥ ವರ್ಗದ ಸಮಸ್ಯಾಪೂರಿತವಿದ್ದ ಸಮಸ್ಯೆಗಳಿಗೆ ಜ್ಯೋತಿಷಿಗಳು ಸ್ಪಷ್ಟ ಅಭಿಪ್ರಾಯವನ್ನು ಹೇಳಬೇಕು. ಏಕೆಂದರೆ ಯಾವ ವಿಷಯದ ಬಗ್ಗೆ ಜನ್ಮಾರಭ್ಯ ಸಂಸ್ಕಾರರೂಪದಿಂದ ಪಡೆದುಕೊಂಡು ಬಂದಿರುವುದಿಲ್ಲವೊ ಅದು ಎಷ್ಟೇ ಪ್ರಯತ್ನಪಟ್ಟರೂ ನಿಲುಕದ ಮಾತು ಎಂಬುದನ್ನು ವಿವರಿಸಬೇಕು.



# ಫಲಜ್ಯೋತಿಷ್ಯ ಮತ್ತು ಆಕ್ಷೇಪಣೆಗಳು

**ಫಲಜ್ಯೋತಿಷ್ಯವು ಶಾಸ್ತ್ರವೇ ? ಕೆಲವೊಂದು ಫಲಗಳು ಏಕೆ ಸರಿ ಬರುವದಿಲ್ಲ ? ದೈವಜ್ಞರಲ್ಲಿ ಭಿನ್ನಾಭಿಪ್ರಾಯವಿರಲು ಕಾರಣವೇನು ? ಅಥವಾ ಇದೇನಾದರೂ ಗಾರುಡಿ ವಿದ್ಯೆಯೋ ? ಎಂದು ಈ ಶಾಸ್ತ್ರದ ಬಗೆಗೆ ಕೇಳಲಾಗುತ್ತಿರುವ ಆಕ್ಷೇಪಣೆಗಳಿಗೆ ಉತ್ತರ ರೂಪವಾಗಿ ಈ ಪ್ರಕರಣದಲ್ಲಿ ವಿವರಿಸಲಾಗಿದೆ.**

ಜ್ಯೋತಿಷ್ಯಶಾಸ್ತ್ರದ ಬಗೆಗೆ ಆಕ್ಷೇಪಿಸುವವರು ಎತ್ತುವ ಮುಖ್ಯ ಮತ್ತು ಮೂಲ ಆಕ್ಷೇಪವೆಂದರೆ "ಫಲಜ್ಯೋತಿಷ್ಯವು ಒಂದು ಶಾಸ್ತ್ರವೆ ?" ಎಂಬುದು. ಇದು ಶಾಸ್ತ್ರವಲ್ಲವೆಂದು ಅವರ ತಿಳುವಳಿಕೆ. ಫಲಜ್ಯೋತಿಷ್ಯವೆಂದರೆ (Applied ಶಾಸ್ತ್ರವೇ ಹೊರತು ಗಣಿತ ಶಾಸ್ತ್ರದಂತೆ ಶುದ್ಧ (Pure) ಶಾಸ್ತ್ರವಲ್ಲ ಎಂಬ ಆಕ್ಷೇಪಣೆಯೂ ಉಂಟು. ಈ ಕಾರಣದಿಂದ ಶಾಸ್ತ್ರವೆಂದರೇನು ಎಂಬುದನ್ನು ಮೊದಲಿಗೆ ವಿವೇಚಿಸಬೇಕಾಗುವದು. ಫಲಜ್ಯೋತಿಷ್ಯದಲ್ಲಿ, ರಾಶಿ-ಗ್ರಹಗಳ, ಸ್ಥಾನ-ದೃಷ್ಟಿ-ಯೋಗಗಳ ಪರಿಣಾಮವು ನಿರ್ದಿಷ್ಟವಾಗಿರುತ್ತದೆ ಎಂದು ಹೇಳಿದೆ. ಆದುದರಿಂದ ಇದೊಂದು ಜ್ಞಾನವನ್ನು ಗ್ರಹಿಸುವ ರೀತಿಯಾಗಿದೆ. ನಿಯಮಬದ್ಧ ಸುಸಂಘಟಿತವಾದ ಜ್ಞಾನವೇ ಶಾಸ್ತ್ರವೆನಿಸುತ್ತದೆ, ಈ ಕಾರಣದಿಂದ ಫಲಜ್ಯೋತಿಷ್ಯವೂ ಒಂದು ಶಾಸ್ತ್ರವಾಗಿದೆ. ಯಾವ ಶಾಸ್ತ್ರವೇ ಆಗಲಿ, ಅನುಭವ ಹಾಗೂ ಪ್ರಯೋಗಗಳಿಂದ ಕ್ರಮಶಃ ಒಂದು ರೂಪವನ್ನು ಪಡೆಯುತ್ತ ಹೋಗುತ್ತದೆ, ರಸಾಯನಶಾಸ್ತ್ರ, ಪದಾರ್ಥ ವಿಜ್ಞಾನಶಾಸ್ತ್ರಗಳಂತೆ ಫಲಜ್ಯೋತಿಷ್ಯವೂ ಅನುಭವ ಹಾಗೂ ಪ್ರಯೋಗಗಳಿಂದ ನಿರ್ಮಿತವಾಗಿರುತ್ತದೆ. ಉದಾಹರಣೆಗೆ : ಪಂಚಮ ಸ್ಥಾನದಲ್ಲಿ ಶನಿ ಇದ್ದರೆ, ಧನು ರಾಶಿಯಲ್ಲಿ ಗುರು ಇದ್ದರೆ, ಬುಧ-ಮಂಗಳರ ಕೇಂದ್ರ ಯೋಗವಿದ್ದರೆ ಏನು ಪರಿಣಾಮವಾಗುವದೆಂಬುದನ್ನು ಜ್ಯೋತಿರ್ವಿದರು ನಿರ್ಧರಿಸಿದ್ದಾರೆ. ಭಿನ್ನ ಭಿನ್ನ ರಾಶಿಗಳ ಹಾಗೂ ಗ್ರಹಗಳ ಗುಣ ಧರ್ಮಗಳು ಯಾವವು ಎಂಬುದನ್ನು ಅನೇಕ ವರುಷಗಳ ಅವಲೋಕನದಿಂದ ಕಂಡುಹಿಡಿದು ಅವರು ಫಲಜ್ಯೋತಿಷ್ಯಕ್ಕೆ ಒಂದು ರೂಪವನ್ನು ಕೊಟ್ಟಿದ್ದಾರೆ. ರಸಾಯನ ಇಲ್ಲವೆ ಪದಾರ್ಥವಿಜ್ಞಾನ

ಶಾಸ್ತ್ರದ ಪ್ರಕಾರ ಯಾವುದೇ ಎರಡು ಪದಾರ್ಥಗಳ ಸಂಯೋಗದಿಂದ ಹೊಸ ಪದಾರ್ಥವು ಹುಟ್ಟುತ್ತದೆ. ಅಥವಾ ಆ ಪದಾರ್ಥಗಳು ತಮ್ಮ ತಮ್ಮ ಗುಣ-ಧರ್ಮಗಳನ್ನು ಕಳೆದುಕೊಳ್ಳುತ್ತವೆ. ಅದೇ ಮೇರೆಗೆ, ಯಾವವೇ ಎರಡು ಇಲ್ಲವೆ ಅನೇಕ ಗ್ರಹಗಳ ಯೋಗದಿಂದ ಭಿನ್ನ ಭಿನ್ನ ಪರಿಣಾಮಗಳಾಗುವುದನ್ನು ಜ್ಯೋತಿರ್ವಿದರು ಕಂಡುಕೊಂಡು ನಿರೂಪಿಸಿದ್ದಾರೆ. ಉದಾಹರಣೆ : ರವಿಯು ಜೊತೆಗೆ ಯಾವುದೇ ಗ್ರಹದ ಯುತಿ ಇದ್ದರೆ (ಅಂಶಾತ್ಮಕ) ಆ ಗ್ರಹವು ತನ್ನ ಸತ್ತ್ವವನ್ನು ಕಳೆದುಕೊಳ್ಳುವದು. ರವಿ-ಚಂದ್ರರ ಯುತಿಯಿದ್ದರೆ ಅಮಾವಾಸ್ಯೆ ಆಗುತ್ತದೆ. (ಚಂದ್ರಾಸ್ತ) ಇದರಂತೆ ಯಾವದೇ ನೀಚಗ್ರಹದಯೋಗವು ಉಚ್ಚಗ್ರಹದೊಂದಿಗೆ ಉಂಟಾದರೆ ನೀಚಗ್ರಹದ ನೀಚತ್ವವು ಭಂಗವಾಗುತ್ತದೆ. ಉದಾ : ಕರ್ಕದಲ್ಲಿ ಗುರು-ಮಂಗಳರ ಯೋಗವಿದ್ದರೆ, ಕನ್ಯಾ ಮೀನಗಳಲ್ಲಿ ಬುಧ-ಶುಕ್ರರ ಯೋಗವಿದ್ದರೆ.

### ಪಂಚಭವತಿ ಪಂಚ ನ ಭವತಿ-

ಇದೊಂದು ಫಲಜ್ಯೋತಿಷ್ಯದ ಬಗೆಗೆ ಹುಟ್ಟಿಕೊಂಡ ಮುಖ್ಯ ಆಕ್ಷೇಪಣೆಯಾಗಿದೆ. 'ಐದು ಆಗುತ್ತವೆ, ಐದು ಆಗುವದಿಲ್ಲ' ಎಂದು ಈ ಮಾತಿನ ಅರ್ಥ. ಜ್ಯೋತಿಷ್ಯವು ಹೇಳಿದ ಹೇಳಿಕೆಗಳಲ್ಲಿ ಅರ್ಧ ಸರಿ, ಅರ್ಧ ತಪ್ಪು ಎಂಬ ಆಕ್ಷೇಪವು ಇದರಲ್ಲಿ ಅಡಕವಾಗಿದೆ. ಹಾಗೆ ವಿಚಾರಿಸಿದರೆ ಯಾವ ವ್ಯಾವಹಾರಿಕ ಶಾಸ್ತ್ರವು ಪರಿಪೂರ್ಣವಿರುತ್ತದೆ ? ವೈದ್ಯಶಾಸ್ತ್ರವನ್ನೇ ಉದಾಹರಣೆಗೆ ತೆಗೆದುಕೊಳ್ಳಿರಿ. ಇದರ ಎಲ್ಲ ನಿಯಮಗಳಿಗೂ ಎಲ್ಲರಿಗೂ ಸರಿ ಹೊಂದುವದಿಲ್ಲವೆಂಬುದನ್ನು ಎಲ್ಲರೂ ಬಲ್ಲರು. ಒಂದು ಔಡಲೆಣ್ಣೆಯ ಸೇವನೆಯ ಪರಿಣಾಮವನ್ನೇ ನೋಡಿರಿ : ಔಡಲೆಣ್ಣೆ ಜುಲಾಬು (ಭೇದಿ) ಕಾರಕ ಎಂಬ ನಿಯಮ ಎಲ್ಲರಿಗೂ ಅನ್ವಯಿಸುವದಿಲ್ಲ. ಅಂತೆಯೇ ಯಾವುದೊಂದು ರೋಗಕ್ಕೆ ಅನೇಕ ಔಷಧಗಳನ್ನು ಕೊಡುವ ಪರಿಪಾಠವಿದೆ. ಈ ಮಾತಿನಿಂದ, ವೈದ್ಯಶಾಸ್ತ್ರವು ಎಷ್ಟರಮಟ್ಟಿಗೆ ಅಥವಾ ಎಷ್ಟು ಪ್ರಮಾಣದಲ್ಲಿ ಫಲದಾಯಕವೋ ಅಷ್ಟುಮಟ್ಟಿಗೆ ಅಥವಾ ಅಷ್ಟು ಪ್ರಮಾಣದಲ್ಲಿ ಫಲಜ್ಯೋತಿಷ್ಯವೂ ಪರಿಣಾಮಕಾರಿಯೆಂದು ಹೇಳಲು ಯಾವ ಅಭ್ಯಂತರವೂ ಇಲ್ಲ. ಹಾಗಾದರೆ, ವೈದ್ಯಕವು ಒಂದು ಶಾಸ್ತ್ರವಾದರೆ ಜ್ಯೋತಿಷ್ಯವು ಏಕಲ್ಲ? ಹೀಗೆಯೇ ಇತರ

ವಿಷಯಗಳಲ್ಲಿಯೂ 'ಪಂಚಭವತೀ ಪಂಚ ನ ಭವತಿ' ಎಂಬ ಮಾತಿನ ಪ್ರತೀತಿಯು ನಮಗೆ ಸದಾ ಆಗುತ್ತಿರುತ್ತದೆ. ಬಿತ್ತಿದ ಒಳ್ಳೆಯ ಬೀಜಗಳೂ ಎಲ್ಲ ಎಲ್ಲಿ ಹುಟ್ಟಿ ಫಲ ಕೊಡುತ್ತವೆ? ಡಾಕ್ಟರರು ಅಥವಾ ವೈದ್ಯರು ಎಲ್ಲ ರೋಗಗಳನ್ನೂ ಎಲ್ಲಿ ಗುಣಪಡಿಸುತ್ತಾರೆ ? ಜಾಣರೆನಿಸಿಕೊಂಡ ಎಲ್ಲ ವಕೀಲರೂ ವ್ಯಾಜ್ಯಗಳನ್ನೆಲ್ಲ ಗೆಲ್ಲುತ್ತಾರೆಯೆ? ಇಂಜಿನಿಯರರ ಹಾಗೂ ವಿಜ್ಞಾನಿಗಳ ತರ್ಕಗಳು, ರಾಜಕಾರಣಿಗಳ ಹಾಗೂ ಪತ್ರಿಕಾಕರ್ತರ ಊಹೆಗಳು ಯಾವಾಗಲೂ ಸರಿಯಾಗಿರುತ್ತವೆಯೆ ? ಎಲ್ಲ ಎಂದರೆ ಅವರೆಲ್ಲರ ಶಾಸ್ತ್ರಗಳೂ ಹತ್ತಕ್ಕೈದು ಮಾತ್ರ ಸಫಲ ಎಂಬಂತಾಯಿತು. ಅದರಂತೆಯೇ ಜ್ಯೋತಿಷ್ಯ ಶಾಸ್ತ್ರದಲ್ಲಿ ೧೧ನೆಯ ಶನಿ. ಇಲ್ಲವೆ ೧೧ ನೆಯ ಗುರು ಇವರು ಶುಭಕಾರಕರೆಂದು ಹೇಳಿದೆ. ಜ್ಯೋತಿಷಿಗಳ ಭವಿಷ್ಯವು ವ್ಯತ್ಯಯಿನ ವಿಷಯದಲ್ಲಿ ತಪ್ಪಿದ ಎಂದು ಆಕ್ಷೇಪವನ್ನು ಹೊರಿಸಲಾಗುತ್ತದೆ. ಆದರೆ ಇದೇ ಮಾತನ್ನು ಡಾಕ್ಟರರ ಅಥವಾ ವೈದ್ಯರ ಬಗ್ಗೆ ಏಕೆ ಹೇಳುವದಿಲ್ಲ? ಅಲೋಪಥಿ, ಹೋಮಿಯೋಪಥಿ, ಆಯುರ್ವೇದಿ, ಯುನಾನಿ ಹೀಗೆ ನಾಲ್ಕು ವರ್ಗದ ನಿಷ್ಣಾತ ಡಾಕ್ಟರರು ವೈದ್ಯರು, ಹಕೀಮರು ಒಬ್ಬ ರೋಗಿಯನ್ನು ಪರೀಕ್ಷಿಸಿ. 'ಇಂದು ಪ್ರಕೃತಿ ಚೆನ್ನಾಗಿದೆ' ಎಂದು ಹೇಳಿದ ಕೆಲ ಗಂಟೆಗಳಲ್ಲಿಯೇ ಆ ರೋಗಿಯ ಪ್ರಾಣಪಕ್ಷಿ ಹಾರಿ ಹೋದ ಎಷ್ಟು ಉದಾಹರಣೆಗಳಿಲ್ಲ? ಈ ಎಲ್ಲ ವಿವೇಚನೆಯಿಂದ, ಇತರ ಎಲ್ಲ ಶಾಸ್ತ್ರಗಳಂತೆಯೇ ಕೆಲವೊಂದು ಸಿದ್ಧಾಂತಗಳನ್ನು ಹೇಳುವ ಫಲಜ್ಯೋತಿಷ್ಯ ಶಾಸ್ತ್ರದ ಬಗ್ಗೆಯೇ ಈ ಆಕ್ಷೇಪಣೆಯನ್ನು ಹೊರಿಸುವುದು, ಸುಸಂಗತವಲ್ಲ, ನಿಷ್ಪಕ್ಷಪಾತವಾದುದಲ್ಲ, ಶಾಸ್ತ್ರೀಯವೂ ಅಲ್ಲ; ಅರ್ಥಾತ್ ಹುರುಳಿಲ್ಲದ ಅಪಾದನೆ ಎಂಬುದು ಸ್ಪಷ್ಟವಾಗುವುದು.

### ದೈವಜ್ಞರಲ್ಲಿ ಮತಭೇದ—

ಜ್ಯೋತಿಷಿಗಳಲ್ಲಿ, ಜ್ಯೋತಿರ್ವಿದರಲ್ಲಿ ಮತಭೇದಗಳಿವೆ; ಎಲ್ಲರೂ ಒಂದು ಮಾತನ್ನು ಎತ್ತಿಹಿಡಿಯುವದಿಲ್ಲ; ಅಥವಾ ವಿರುದ್ಧಾಭಿಪ್ರಾಯಗಳನ್ನೂ ಪ್ರಕಟಿಸುವುದುಂಟು. ಇದು ಕೂಡ ತಿರುಳಿಲ್ಲದ ಆರೋಪಣೆಯೇ ಸರಿ. ಮತಭೇದವು ಕೇವಲ ಜ್ಯೋತಿರ್ವಿದರಲ್ಲಿ ಇಲ್ಲ. ಎಲ್ಲ ಶಾಸ್ತ್ರಜ್ಞರಲ್ಲಿಯೂ ಪಂಡಿತರಲ್ಲಿಯೂ ಭಿನ್ನಾಭಿಪ್ರಾಯಗಳಿದ್ದೇ ಇರುತ್ತವೆ. ವಿದ್ಯಾರ್ಥಿಗಳ ಪರೀಕ್ಷೆಯ ಉತ್ತರ

ಕಾಗದಗಳನ್ನು ಪರೀಕ್ಷಿಸುವ ಪರೀಕ್ಷಕರು— ಒಂದೇ ಕಾಗದವನ್ನು ಅನೇಕರು ಪರೀಕ್ಷಿಸಿದ ಸಂದರ್ಭದಲ್ಲಿ ಎಲ್ಲರೂ ಕೊಡುವ ಗುಣಾಂಕಗಳು ಒಂದೇ ಆಗಿರುವದಿಲ್ಲ. ಇದರಂತೆ ಫಲಜ್ಯೋತಿಷ್ಯಶಾಸ್ತ್ರದ ಮೇಲೆ ಬರೆದ ಜ್ಯೋತಿಷಿಯೂ ಅಲ್ಪಾಯುಷ್ಯವನ್ನು ದೀರ್ಘಾಯುಷ್ಯವನ್ನಾಗಿಯಾಗಲಿ, ದೀರ್ಘಾಯುವನ್ನು ಅಲ್ಪಾಯುವನ್ನಾಗಲಿ ಮಾಡಿ ಹೇಳಲಾರ.

## ಗ್ರಹಗಳ ಪರಿಣಾಮ—

ಗ್ರಹಗಳ ಪರಿಣಾಮವು ಮನುಷ್ಯನ ಮೇಲೆ ಆಗುತ್ತದೆ ಎಂಬುದು ಫಲಜ್ಯೋತಿಷ್ಯಶಾಸ್ತ್ರದ ಸಿದ್ಧಾಂತಗಳಲ್ಲಿ ಒಂದಾಗಿದೆ. ಗ್ರಹಗಳ ಪರಿಣಾಮ ಮನುಷ್ಯನ ಮೇಲೆ ಆಗಲಾರದು. ಜ್ಯೋತಿಷ್ಯಶಾಸ್ತ್ರವು ಏನೋ ಹೇಳುತ್ತದೆ, ಎಂಬುದು ಇನ್ನೊಂದು ಆಕ್ಷೇಪಣೆ. ಆದರೆ, ಮಾನುಷ್ಯನ ಮೇಲೆ ಗ್ರಹಗಳ ಪರಿಣಾಮವು ಸತ್ಯವಾಗಿ ಆಗುತ್ತದೆ ಎಂದು ಸಾರಿ ಹೇಳಬಹುದಲ್ಲವೆ, ಏಕೆ ಆಗುತ್ತದೆ ಎಂದು ಹೇಳುವದು ಅಶಕ್ಯವು. ಈ ಬಗೆಯ ಆಕ್ಷೇಪವನ್ನು ಭೌತಿಕ ಶಾಸ್ತ್ರದ ಬಗ್ಗೆಯೂ ಎತ್ತಬಹುದು. ಲೋಹಚುಂಬಕವು ಕಬ್ಬಿಣವನ್ನು ಏಕೆ ಆಕರ್ಷಿಸುತ್ತವೆ? ಹೋಕಾಯಂತ್ರವು ಉತ್ತರದಿಕ್ಕನ್ನೇ ಬೊಟ್ಟುಮಾಡಿ ಏಕೆ ತೋರಿಸುತ್ತದೆ? ಆಳು ಎತ್ತುಗಳಂತೆ ಕುದುರೆ ಕತ್ತೆಗಳಂತೆ ಕೋಡುಗಳು ಏಕೆ ಇರುವದಿಲ್ಲ? ಮೊದಲಿನ ಪ್ರಶ್ನೆಗಳಿಗೆ ಸಮಾಧಾನಕರವಾಗಿ ಉತ್ತರ ಕೊಡುವುದು ಹೇಗೆ ಸಾಧ್ಯವಿಲ್ಲವೋ ಹಾಗೆಯೇ ಗ್ರಹಗಳ ಪರಿಣಾಮವು ಮನುಷ್ಯನ ಮೇಲೆ ಏಕೆ ಆಗುತ್ತದೆ ಎಂಬುದನ್ನು ಸುಲಭವಾಗಿ ತಿಳಿಸಿ ಹೇಳುವದು ಅಸಾಧ್ಯವು. ಈ ಪರಿಣಾಮಗಳು ನಿಜವೆಂದು ಗ್ರಹಿಸಿ ಮುಂದೆ ಸಾಗುವದೊಳಿತು. ಆದರೆ ಗ್ರಹಗಳ ಶಕ್ತಿಯು ಯಾವ ರೀತಿಯಿಂದ ಕೆಲಸ ಮಾಡುತ್ತದೆಂಬುದನ್ನು ಹೇಳಲಿಕ್ಕೆ ಬರುತ್ತದೆ. ಪ್ರತಿಯೊಂದು ಗ್ರಹಕ್ಕೂ ವಿಶಿಷ್ಟ ಗುಣಧರ್ಮವಿರುವದೆಂದು ಜ್ಯೋತಿರ್ವಿದರು ಕಂಡು ಹಿಡಿದಿದ್ದಾರೆ. ಆಯಾ ಗ್ರಹಗಳ ಗುಣಧರ್ಮಗಳಿಗನುಸಾರವಾಗಿ ಮಾನವನ ಮೇಲೆ ಪರಿಣಾಮವಾಗುತ್ತದೆಂದು ಈ ಶಾಸ್ತ್ರವು ಹೇಳುತ್ತದೆ. ಮಾನವನ ಜನ್ಮಕಾಲದ ಲಗ್ನಕುಂಡಲಿಯ ಆಧಾರದ ಮೇಲಿಂದ, ಗೋಚರೀ ಗ್ರಹಗಳ ಪರಿಭ್ರಮಣದ ಮೇಲಿಂದ ಅವನ ಸುಖದ ಕಾಲವು ಯಾವದು? ದುಃಖದ ಕಾಲವು ಯಾವದು? ಎಂಬು

ದನ್ನು ಫಲಜ್ಯೋತಿಷ್ಯ ಶಾಸ್ತ್ರದ ಸಹಾಯದಿಂದ ತಿಳಿದುಕೊಳ್ಳಬಹುದು. ಮೂಡಗಾಳಿಯ ದಿನಗಳಲ್ಲಿ ಗಿಡಮರಗಳು ಒಣಗುವಂತೆ ವಸಂತ ಮಾಸದಲ್ಲಿ ಮತ್ತೆ ಚಿಗಿತು ನಳನಳಿಸುವಂತೆ ಗ್ರಹಗಳು ಪ್ರತಿಕೂಲವಾದಾಗ ಮಾನವನ ಜೀವನದಲ್ಲಿ ಸಂಕಟಗಳೂ, ಅನುಕೂಲವಾದಾಗ ಸುಖಸೌಭಾಗ್ಯಗಳೂ ಉಂಟಾಗುತ್ತವೆ.

## ಸಿದ್ಧ ಪಡಿಸುವುದಕ್ಕೆ ಆಹ್ವಾನ—

'ನಿಮ್ಮ ಶಾಸ್ತ್ರವು ನಿಜವಾದುದಾಗಿದ್ದರೆ ನಮ್ಮ ಸಂಶಯವನ್ನು ನಿವಾರಿಸಿ' ಎಂದೂ ಜ್ಯೋತಿಷಿಗಳನ್ನು ಆಹ್ವಾನಿಸಲಾಗುತ್ತದೆ. ಜ್ಯೋತಿಷ್ಯದ ಸಾಮಾನ್ಯ ಜ್ಞಾನವುಳ್ಳ ಜೋಯಿಸನು ಈ ಆಹ್ವಾನದಿಂದ ಕಕ್ಕಾವಿಕ್ಕಿಯಾದರೆ ಅದೇನು ಶಾಸ್ತ್ರದ ಸೋಲಲ್ಲ. ಜ್ಯೋತಿಷ್ಯ ಶಾಸ್ತ್ರದ ಅನೇಕ ಗ್ರಂಥಗಳನ್ನು ಪಂಡಿತರು ರಚಿಸಿದ್ದಾರೆ. ಅವುಗಳಲ್ಲಿಯ ವಾಕ್ಯಗಳು ಆ ಶಾಸ್ತ್ರದ ಬಗೆಗಿನ ಸಂದೇಹಗಳನ್ನು ನಿವಾರಿಸುವವು ? ಆದರೆ ಅದಕ್ಕೆ ಆಳವಾದ ಅಭ್ಯಾಸವು ಅಗತ್ಯ. ಅಲ್ಲದೆ, ಉಪಲಬ್ಧವಿರುವ ಅನೇಕ ಜಾತಕಗಳನ್ನು ಪರಿಶೀಲಿಸಿಯೂ ಸಂಶಯಗಳನ್ನು ನಿವಾರಿಸಿಕೊಳ್ಳಲಾಗುತ್ತದೆ. ಯಾವುದಾದರೊಂದು ಸಂಶಯವುಂಟಾಗಿದ್ದರೆ, ಜಿಜ್ಞಾಸುದೃಷ್ಟಿಯಿಂದ ಗ್ರಂಥಾಧ್ಯಯನ ಮತ್ತು ಕುಂಡಲಿ ಪರೀಕ್ಷಣ ಮಾಡಿದರೆ ತಕ್ಕ ಪರಿಹಾರ ಸಿಕ್ಕುತ್ತದೆ. ಆದರೆ ಕೇವಲ ಜ್ಯೋತಿಷಿಯ ಪರೀಕ್ಷೆಗಾಗಿ ಯಾರಾದರೂ ಪ್ರಶ್ನಿಸಿದರೆ, ಅದಕ್ಕೆ ಉತ್ತರವಿಷ್ಟೆ. ಹತ್ತು ರೋಗಿಗಳನ್ನು ಒಬ್ಬ ವೈದ್ಯನ ಚಿಕಿತ್ಸೆಗೆ ಒಪ್ಪಿಸಿದ್ದರೆ, ಬಹುಶಃ ಅವನಿಗೆ ಆ ಎಲ್ಲರ ರೋಗಗಳನ್ನು ಗುಣಪಡಿಸಲು ಸಾಧ್ಯವಾಗುವದಿಲ್ಲ. ಅದರಂತೆ ಜ್ಯೋತಿಷಿಯು ಪ್ರತಿಯೊಬ್ಬನನ್ನು ತೃಪ್ತಿಪಡಿಸಲಾರನು. ಜ್ಯೋತಿಷಿಯು ಫಲಜ್ಯೋತಿಷ್ಯವನ್ನು ಹೇಳುವಾಗ ಉತ್ತಮ ಫಲ, ಮಧ್ಯಮ ಫಲ, ಕನಿಷ್ಠ ಫಲ— ಹೀಗೆ ಸಂದಿಗ್ಧವಾಗಿ ಹೇಳುವರೆಂದೂ ಆಕ್ಷೇಪಿಸಲಾಗುತ್ತದೆ. ಅದಕ್ಕೆ ಕಾರಣವೆಂದರೆ ಫಲ ಜ್ಯೋತಿಷ್ಯದಲ್ಲಿ ನಿರ್ದಿಷ್ಟವಾದ, ನಿಶ್ಚಿತವಾದ ಉತ್ತರವನ್ನು ಕೊಡಲಾಗುವದಿಲ್ಲ. ಕಾಲಮಾನ, ಸ್ಥಾನಮಾನ, ದೇಶ-ಸಮಾಜ ಉದ್ಯೋಗ-ವ್ಯವಸಾಯ ಇತ್ಯಾದಿಗಳನ್ನು ಅನುಸರಿಸಿ ಆ ಉತ್ತರದ ಸರಿಯಾದ ಅರ್ಥವನ್ನು ಗ್ರಹಿಸಬೇಕಾಗುವದು. ಉದಾ: ಯಾವನೊಬ್ಬ ನೌಕರನಿಗೆ

ನಿನಗೆ ಅನುಕೂಲವಿದೆ ಎಂದು ಭವಿಷ್ಯ ಹೇಳಿದೆವೆಂದು ತಿಳಿಯಿರಿ. ಎಂದರೆ ಅವನಿಗೆ ಬಡತಿ, ಇಚ್ಛಿತ ಸ್ಥಳಕ್ಕೆ ವರ್ಗ, ನೌಕರಿ ಸ್ಥಿರವಾಗುವದು ಅನಿಷ್ಟ ಮೇಲಾಧಿಕಾರಿಗೆ ಸ್ಥಳಾಂತರವಾಗುವದು, ಇಷ್ಟವಾದ ದಫ್ತರನ್ನು ವಹಿಸಿಕೊಳ್ಳುವದು ಇತ್ಯಾದಿ ಈ ವಿಷಯಗಳಲ್ಲಿ ಅವನಿಗೆ ಅನುಕೂಲವಾದ ಫಲಗಳು ಒದಗಿ ಬರಬಹುದೆಂದು ತಿಳಿಯಬೇಕು. ಆದರೆ ಸತ್ಯವಾದ ಭವಿಷ್ಯವು ಹೊರಡುವದಕ್ಕೆ ಕೇವಲ ಆ ವ್ಯಕ್ತಿಯ ಜನನ ವೇಳೆಯು ಸರಿಯಾಗಿ ತಿಳಿಯುವದಗತ್ಯ. "ಯೋಗ್ಯ ಜನ್ಮಪತ್ರಿಕೆ ಇಲ್ಲದವನ ಭವಿಷ್ಯವನ್ನು ಹೇಳುವುದೆಂದರೆ ದೀಪವಿಲ್ಲದ ಮನೆಯಲ್ಲಿ ಕೋಣೆಗಳನ್ನು ಹುಡುಕಿದಂತೆಯೇ" ಸರಿ. ಭವಿಷ್ಯಗಳು ಹೆಚ್ಚಾಗಿ ತಪ್ಪುವದು ಜನನಕಾಲ ಸರಿಯಾಗಿ ತಿಳಿಯದಿರುವದರಿಂದಲೇ ಎಂದು ಹೇಳಬಹುದು. ಎಷ್ಟೋ ಸಲ, ಜನನಕಾಲದ ಟಿಪ್ಪಣೆ ೫ ನಿಮಿಷ ಕಡಿಮೆಯಾಗಿದ್ದರೂ ಲಗ್ನ, ರಾಶಿ ಚರಣ, ದಶೆ, ಯೋಗ, ಸ್ಥಾನ ಭಾವ ಮುಂತಾದವುಗಳೆಲ್ಲ ಬದಲಾಗುತ್ತವೆ. ಇದರಿಂದ ಭಿನ್ನವಾದ ಸಂದಿಗ್ಧವಾದ ಉತ್ತರಗಳು ಹೊರಡುತ್ತವೆ. ಆದುದರಿಂದ ಯಾವದೊಂದು ಜಾತಕವನ್ನು ಪರಿಶೀಲಿಸುವಾಗ ಅದರಲ್ಲಿ ಆರೋಗ್ಯ, ಆಯುಷ್ಯ, ಸಂಪತ್ತು ಮುಂತಾದ ವಿಷಯಗಳನ್ನು ಸಂಕ್ಷೇಪವಾಗಿ ಹೇಳಲಾಗುವದು.

## ಇದೂ ಒಂದು ಗಾರುಡೀ ವಿದ್ಯೆಯೆ !

ಫಲಜ್ಯೋತಿಷ್ಯವೂ ಒಂದು ರೀತಿಯ ಗಾರುಡೀ ವಿದ್ಯೆ ಎಂದು ಆರೋಪಿಸುವ ಜನರೂ ಉಂಟು.

> ಕುಹಕಾವೇಶಪಿಹಿತೈಃ ಕರ್ಣೋಪಶ್ರುತಿಹೇತುಭಿಃ
> ಕೃತ ದೇಶೋ ನ ಸರ್ವತ್ರ ಪ್ರಷ್ಟವ್ಯೋ ನ ಸ ದೈವವಿತ್||
>
> —ಬೃಹತ್ಸಂಹಿತಾ

ಜಾದೂ ಅಥವಾ ಗಾರುಡೀವಿದ್ಯೆ, ಪಿಶಾಚಪ್ರವೇಶ ಅಥವಾ ಕರ್ಣಶ್ರುತಿ ಮುಂತಾದ ಸಾಧನಗಳಿಂದ ಭವಿಷ್ಯವನ್ನು ಹೇಳುವದು ಫಲಜ್ಯೋತಿಷ್ಯವೂ ಅಲ್ಲ, ಹಾಗೂ ಅವರ ದೈವಜ್ಞರೂ ಅಲ್ಲವೆಂದು ಹೇಳಲಾಗಿದೆ. ಈ ಕಾರಣದಿಂದ ಜ್ಯೋತಿಷಿಯು ಗ್ರಹಗಳ ಗತಿಯಿಂದ ದೈವವನ್ನು ಅಳೆಯುವ ಶಾಸ್ತ್ರಜ್ಞನಾಗಿದ್ದಾನೆ. ಇದರಲ್ಲಿ ಸೋಜಿಗದ ಸಂಗತಿಯೇನೂ ಇಲ್ಲ.

ಆಗುವದನ್ನೆಲ್ಲ ತಪ್ಪಿಸಲು ಬರುವದಿಲ್ಲವೆಂದು ಹೇಳಿ, ತಮ್ಮ ದೈವದಲ್ಲಿದ್ದುದನ್ನು ಮೊದಲು ತಿಳಿದು ಮಾಡುವದೇನು ಎಂದು ಕೆಲವರು ಜ್ಯೋತಿಷ್ಯದ ಬಗ್ಗೆ ತಾತ್ಸಾರ ಭಾವನೆ ತಳೆದಿರುತ್ತಾರೆ. ಈಗ ಮಳೆ ಬರುವದಿದೆ ಎಂದು ತಿಳಿಯಿರಿ, ನಾವು ಅದನ್ನು ತಿಳಿದು ಛತ್ರಿಗಳು, ಕಂಬಳಿ, ರೇನಕೋಟು ಮೊದಲಾದ ಸಾಧನಗಳನ್ನೊಯ್ದು ನಮ್ಮನ್ನು ಕಾಪಾಡಿಕೊಳ್ಳಬಹುದು. ಇದರಿಂದ ಮಳೆಯನ್ನೇನೋ ನಿಲ್ಲಿಸಲಾರೆವು. ಇದರಂತೆ ನಮ್ಮ ಹಣೆಬರಹವನ್ನು ತಪ್ಪಿಸಲು ಸಾಧ್ಯವಿಲ್ಲದಿದ್ದರೂ ಅದನ್ನು ಜಪ, ತಪ, ದಾನ ಮುಂತಾದ ಧಾರ್ಮಿಕ ವಿಧಿಗಳಿಂದ ಅಶುಭ ಗ್ರಹಗಳ ಪರಿಣಾಮವನ್ನು ಕಡಿಮೆ ಮಾಡಬಹುದು. ಇದು ಪ್ರಾರಬ್ಧವಾದುದಲ್ಲ. ನಮ್ಮ ಮುಂದಿನದನ್ನು ತಿಳಿದುಕೊಂಡು ಮುಂಜಾಗ್ರತೆ ವಹಿಸುವದಕ್ಕೆ ಸಹಾಯಕ ಶಾಸ್ತ್ರವಾಗಿದೆ. ಯೋಗಿಗಳು ತಮ್ಮ ಆಧ್ಯಾತ್ಮಿಕ ಸಾಮರ್ಥ್ಯದಿಂದ ತಮ್ಮ ಗ್ರಹಗತಿಯ ಪರಿಣಾಮವನ್ನೇ ಬದಲಿಬಿಟ್ಟಿರುತ್ತಾರೆ. ಆದ್ದರಿಂದ ಇದು ಪ್ರಾರಬ್ಧವಾದವಲ್ಲ.

**ಶಾಸ್ತ್ರದ ಉತ್ಪತ್ತಿ—**

ಈ ಶಾಸ್ತ್ರದಲ್ಲಿ ಸಿದ್ಧಾಂತ, ಸಂಹಿತೆ, ಹೋರಾ ಎಂಬ ಮೂರು ಪ್ರಕಾರಗಳನ್ನು ಮಾಡಿದ್ದಾರೆ. ಗ್ರಹಗಳ ಸ್ಥಿತಿಗತಿ. ಆಯನ, ಯೋಗ, ಗ್ರಹಣ ಮುಂತಾದ ಗಣಿತಗಳು ಸಮಾವೇಶಗೊಂಡ ಭಾಗಕ್ಕೆ ಸಿದ್ಧಾಂತವೆಂದು ಎನ್ನುತ್ತಾರೆ. ಗ್ರಹಲಾಘವ, ಕೇಸವಿ, ಕೇತಕಿ, ಮುಂತಾದವು ಗಣಿತದ ಪ್ರಕಾರಗಳು. ಪರ್ಜನ್ಯ, ಅತಿವೃಷ್ಟಿ, ಅನಾವೃಷ್ಟಿ, ಭೂಕಂಪ, ಬರಗಾಲ, ರಾಜ್ಯಕ್ರಾಂತಿ, ಮಹಾಯುದ್ಧ ಮುಂತಾದ ವಿಷಯಗಳನ್ನು ಕಾಲಕ್ಕನುಸಾರವಾಗಿ ಆಯಾ ದೇಶಗಳಲ್ಲಿ ಯಾವ ಪರಿಣಾಮವನ್ನು ಮಾಡುತ್ತವೆ ಎಂಬುದನ್ನು ಸಂಹಿತೆಯಲ್ಲಿ ಹೇಳಿದೆ. ಇದಲ್ಲದೆ ಯಾವುದೊಂದು ಪಟ್ಟಣದ ರಾಶಿಯನ್ನು ನಿಶ್ಚಯಿಸಿ ಅಥವಾ ಯಾವದೇ ದೇಶದ ರಾಜ. ರಾಜ್ಯ ಪ್ರಮುಖ, ರಾಷ್ಟ್ರಪತಿಯ ಜಾತಕದಿಂದ ದೇಶದ ಮೇಲಾಗುವ ಪರಿಣಾಮವನ್ನು ಕೂಡ ಸಂಹಿತೆಯಲ್ಲಿ ಹೇಳಿದೆ. ಹೋರಾ ಅಥವಾ ಜಾತಕದ ಮೇಲಿಂದ ಮನುಷ್ಯನ ಜನ್ಮಕಾಲದ ಗ್ರಹಗಳ ಸ್ಥಿತಿಗಳಿಂದ ಅವನ ಆಯುಷ್ಯದಲ್ಲಿ ಸುಖದ ಕಾಲ ಯಾವುದು? ಕಷ್ಟದ ಕಾಲ ಯಾವುದು? ಎಂಬುದನ್ನು ಹೋರಾದಲ್ಲಿ ಹೇಳಿದೆ ದ್ವಾದಶ ಭಾವ ವರ್ಣನೆ, ಹಾಗೂ ಕಾಲನಿರ್ಣಯ ಎಂಬ ಮತ್ತೆರಡು ಉಪ

ಭೇದಗಳು ಇದರಲ್ಲಿವೆ. ಕಾಲನಿರ್ಣಯದಲ್ಲಿ ಅನೇಕ ಪ್ರಕಾರಗಳಿವೆ. ದಶಾ ಪದ್ಧತಿ, ತಾಜಿಕಪದ್ಧತಿ ಗೋಚರೀಗ್ರಹಗಳ ಪರಿಭ್ರಮಣ, ದಿನವರ್ಷಪದ್ಧತಿ, ಪ್ರಾಥಮಿಕ ಯೋಗಪದ್ಧತಿ ಮುಂತಾದವು ಮನುಷ್ಯನ ಆಯುಷ್ಯದಲ್ಲಿರುವ ಸುಖದುಃಖಗಳ ಕಾಲವನ್ನು ವಿವೇಚಿಸುವವು. ಮೊದಲು ಚಂದ್ರನಂತಹ ಶೀಘ್ರ ಗ್ರಹಗಳಿಂದ ಭಿನ್ನ ಭಿನ್ನ ನಕ್ಷತ್ರ ಹಾಗೂ ರಾಶಿಗಳ ಮೇಲಾಗುವ ಪರಿಭ್ರಮಣದ ಪರಿಣಾಮವನ್ನು ಅನೇಕ ವರುಷ ಅವಲೋಕಿಸಿ ಕ್ರಮಶಃ ರವಿ, ಶುಕ್ರ, ಬುಧ, ಮಂಗಳ, ಗುರು ಶನಿ ರಾಹು ಮುಂತಾದ ಗ್ರಹಗಳ ಪರಿಣಾಮವನ್ನು ಕಂಡು ಹಿಡಿದಿದ್ದಾರೆ.

**ಉಪಸಂಹಾರ—**

ಜ್ಯೋತಿಷಿ, ವೈದ್ಯ, ಹಾಗೂ ಧರ್ಮಾಧಿಕಾರಿ ಇವರು ಎಷ್ಟು ನಿಸ್ಪೃಹರಾಗಿರುತ್ತಾರೋ ಅಷ್ಟೇ ದೇಶದ ಕಲ್ಯಾಣವಾಗುತ್ತದೆ. ವೈದ್ಯನು ದೈಹಿಕ ರೋಗಗಳನ್ನು ಹೋಗಲಾಡಿಸಿದರೆ ಜ್ಯೋತಿಷಿಯು ಮಾನಸಿಕ ರೋಗಗಳನ್ನು ಹೊಡೆದೋಡಿಸುತ್ತಾನೆ. ಜೀವನದಲ್ಲಿ ಸುಖ ದುಃಖಗಳ ಸರಿಬೆರಿಕೆ ಇರುತ್ತದೆ. ಸುಖದ ದಿನಗಳು ಚಿಕ್ಕವೆಂದೂ ದುಃಖದ ದಿನಗಳು ದೊಡ್ಡವೆಂದೂ ನಮ್ಮ ಭಾವನೆ ಇರುತ್ತದೆ. ತಾಳ್ಮೆ ಹಾಗೂ ಶ್ರದ್ಧೆ ಇರುವವನಿಗೆ ಎಂತಹ ಕಷ್ಟಗಳುಬಂದರೂ ಪರಿಣಾಮವನ್ನುಂಟು ಮಾಡುವದಿಲ್ಲ. ಜ್ಯೋತಿಷಿಯು ಮುಖ್ಯವಾಗಿ ಹಣವನ್ನು ಅಪೇಕ್ಷಿಸಬಾರದು. ತಾನಾಗಿಯೇ ಬಂದ ಹಣ ಇವನು ಹೀರಿ ತೆಗೆಯುವ ಹಣಕ್ಕಿಂತ ಹೆಚ್ಚಾಗಿರುವದಲ್ಲದೆ, ಜೊತೆಗೆ ಭಕ್ತಿ ಗೌರವಗಳನ್ನೂ ತರುವದು. ದುಡ್ಡಿಗೆ ಎರಡು ಪ್ರಶ್ನೆಗಳಿಗೆ ಉತ್ತರ ಹೇಳುವ ಜ್ಯೋತಿಷ್ಯಗಳ ಸಂಖ್ಯೆ ಬೆಳೆದುದು. ಫಲಜ್ಯೋತಿಷ್ಯದ ಬಗ್ಗೆ ಆಕ್ಷೇಪಗಳನ್ನೂ ತಿರಸ್ಕಾರವನ್ನೂ ಹುಟ್ಟಿಸುವುದಕ್ಕೆ ಕೆಲಮಟ್ಟಿಗೆ ಕಾರಣವಾಗಿವೆ. ಹಣದ ಪ್ರಭಾವಕ್ಕೊಳಗಾಗಿ ಜ್ಯೋತಿಷಿ ತನ್ನ ಅಭಿಪ್ರಾಯವನ್ನು ಬದಲು ಮಾಡುವದು ಸರ್ವಥಾ ಯೋಗ್ಯವಲ್ಲ. ಅಲ್ಲದೆ ಅದು ಸಮಾಜಕ್ಕೆ ಮಾರಕವಾದದ್ದು. ಬಡವ-ಸಿರಿವಂತರೆಂಬ ಪಂಡಿತ ಪಾಮರರೆಂಬ ಭೇದಭಾವದಿಂದ ಅವನು ಜ್ಯೋತಿಷ್ಯ ಹೇಳಬಾರದು. ಎಲ್ಲರನ್ನೂ ಸಮಭಾವದಿಂದ ಕಂಡು ಅವರವರ ಪ್ರಶ್ನೆಗಳಿಗೆ ಶಾಸ್ತ್ರಾಧಾರದಿಂದ ಸರಿಯಾದ ಉತ್ತರಗಳನ್ನು ಹೇಳುವದು ಅವನ ಕರ್ತವ್ಯ. ಅವನು ಅಪ್ರಿಯವಾದ ಸತ್ಯವನ್ನು ಆಡಬಾರದು. ಆದರೆ ಸತ್ಯವನ್ನು ಬಚ್ಚಿಡದೆ ಸೂಚ್ಯವಾಗಿ

ಹೇಳಬೇಕು. ಉದಾ : ಒಬ್ಬನು ತನ್ನ ಹೆಂಡತಿಯ ಶೀಲದ ಬಗ್ಗೆ ಸಂಶಯ ದಿಂದ ಜ್ಯೋತಿಷಿಯನ್ನು ಪ್ರಶ್ನಿಸುತ್ತಾನೆ. ಶಾಸ್ತ್ರದ ಪ್ರಕಾರ ಅವನ ಸಂಶಯವು ಸತ್ಯವೆಂದು ಕಂಡು ಬಂದರೆ ಜ್ಯೋತಿಷಿ ಹೇಗೆ ಹೇಳಬೇಕು? ಥಟ್ಟನೆ ಸ್ಪಷ್ಟವಾಗಿ ತಾನು ಕಂಡ ಸತ್ಯವನ್ನು ಹೇಳಿಬಿಟ್ಟರೆ ಎಂತೆಂಥಹ ಅನಾಹುತಗಳೋ ಆಗಿಬಿಡುವ ಸಂಭವವುಂಟು. ಇಂಥ ಸಂದರ್ಭದಲ್ಲಿ ಜ್ಯೋತಿಷಿ ಇಬ್ಬರಿಗೂ ಕೆಡಕಾಗದಂತೆ, ಸತ್ಯಕ್ಕೆ ಭಂಗ ಬರದಂತೆ, ಕಲ್ಯಾಣ ದೃಷ್ಟಿಯನ್ನಿಟ್ಟೇ ತನ್ನ ಅಭಿಪ್ರಾಯವನ್ನು ಹೇಳಬೇಕಾಗುವದು. ಈ ಮೊದಲಾದ ಕಾರಣದಿಂದ ಜ್ಯೋತಿಷಿಯಲ್ಲಿ ನೈತಿಕ ಹಾಗೂ ಧಾರ್ಮಿಕ ಬಲ-ವಿರುವದು ಅತ್ಯಾವಶ್ಯವಾಗಿದೆ. ಅವನೊಬ್ಬ ಸರ್ಪಿಷ್ಟ ಯೋಗಿಯಂತೆ ಜೀವನ ವನ್ನು ಸಾಗಿಸುವವನಾದರೆ ಅವನಿಂದ ಲೋಕದ ಕಲ್ಯಾಣವಾಗುತ್ತದೆ. ಅದು ಬಿಟ್ಟು, ಇವನೊಂದು ಉದ್ಯೋಗ-ವ್ಯವಹಾರವೆಂದು ಕೈಕೊಂಡು ನಡೆ ಸುವದು ಗೌಣ.

ಪ್ರಾಚೀನ ಕಾಲದಿಂದಲೂ ಈ ಶಾಸ್ತ್ರವನ್ನು ನಮ್ಮಲ್ಲಿ ಋಷಿಮುನಿಗಳು ಅಭ್ಯಸಿಸಿದ್ದಾರೆ. ಹಿಂದಿನ ಕವಿಗಳೆಲ್ಲ ಜ್ಯೋತಿಷ್ಯದಲ್ಲಿ ಪಾರಂಗತರಾಗಿರು ತ್ತಿದ್ದರು. ಇದಕ್ಕೆ ಅವರು ದೊಡ್ಡ ಸ್ಥಾನವನ್ನು ಕಲ್ಪಿಸಿಕೊಟ್ಟಿದ್ದಾರೆ. 'ವೇದದ ನಿರ್ಮಲವಾದ ಕಣ್ಣು' ಎಂಬ ಪ್ರಶಸ್ತಿಯನ್ನು ಜ್ಯೋತಿಷ್ಯಶಾಸ್ತ್ರಕ್ಕೆ ಕೊಟ್ಟು ಇದೊಂದು ಜ್ಞಾನಭಂಡಾರವೆಂಬ ಗೌರವವನ್ನು ಪೂರ್ವಜರು ಸಲ್ಲಿಸಿದ್ದಾರೆ. "It is the mother of all sciences" (ಎಲ್ಲ ವಿಜ್ಞಾನಗಳ ತಾಯಿ ಇದು)" ಎಂದು ಕೆಲವರೆಂದಿದ್ದಾರೆ.

ಅಪ್ರತ್ಯಕ್ಷಂ ತು ಶಾಸ್ತ್ರಾಣಿ ವಿವಾದಸ್ತೇಷು ಕೇವಲಂ ।
ಪ್ರತ್ಯಕ್ಷಂ ಜ್ಯೋತಿಷಂ ಶಾಸ್ತ್ರಂ ಚಂದ್ರಾರ್ಕೌ ಯತ್ರ ಸಾಕ್ಷಿಣೌ ॥

ಎಂಬ ಮಾತಿನಲ್ಲಿ ಈ ಶಾಸ್ತ್ರದ ಮಹತ್ವವನ್ನು ಕಾಣಬಹುದಾಗಿದೆ. ನಾರದ ಮುನಿಗಳು :

ವೇದಸ್ಯ ನಿರ್ಮಲಂ ಚಕ್ಷುರ್ಜ್ಯೋತಿಶ್ಶಾಸ್ತ್ರಮಕಲ್ಮಷಂ ।
ತಸ್ಮಾಜ್ಜಗದ್ಧಿತಾಯೇದಂ ಬ್ರಹ್ಮಣಾ ನಿರ್ಮಿತಂ ಪುರಾ ॥
ಅತ ಏವ ದ್ವಿಜೈರೇತವ್ಯಂ ಪ್ರಯತ್ನತ ।

ಎಂದು ಹೇಳಿದ್ದಾರೆ. ಗರ್ಗ ಎಂಬ ಮುನಿಗಳು ಜ್ಯೋತಿಷ್ಯ ಜ್ಞಾನದಿಂದ ಪರಮಗತಿಯು ಪ್ರಾಪ್ತವಾಗುವದೆಂದು ಹೇಳಿದ್ದಾರೆ. ಅವರ ವಾಕ್ಯ ಇದು :

ಜ್ಯೋತಿಶ್ಚಕ್ರೇತು ಲೋಕಸ್ಯ ಸರ್ವಸ್ಯೋಕ್ತಂ ಶುಭಾಶುಭಂ ।
ಜ್ಯೋತಿರ್ಜ್ಞಾನಂ ತು ಯೋ ವೇದ ಸ ಯಾತಿ ಪರಮಾಂಗತಿಂ

ಇನ್ನೊಂದು ಮಾತನ್ನು ಇಲ್ಲಿ ಬರೆಯದೆಯೆ ಗತ್ಯಂತರವಿಲ್ಲ. ಈ ಪುರಾತನವಾದ ಶಾಸ್ತ್ರದ ಬಗ್ಗೆ ಹಿಂದಿನ ಕಾಲದಲ್ಲಿ ಎಷ್ಟು ಗ್ರಂಥಗಳು ಹುಟ್ಟಿವೆಯೋ ಅವುಗಳ ಅಂಗುಲದಷ್ಟು ಭಾಗವೂ ಇಂದು ಹೊಸದಾಗಿ ಬರೆಯಲ್ಪಟ್ಟಿಲ್ಲ. ಹಿಂದಿನ ಶುಭ ಹಾಗೂ ಅಶುಭ ಯೋಗಗಳಿಗೆ ಇಂದಿನ ಹೊಸ ಅರ್ಥಗಳನ್ನು ಶೋಧಿಸಿ ಬರೆಯಬೇಕಾಗಿದೆ. ಹಿಂದಿನ ಕಾಲದಲ್ಲಿ ಸಾಹಿತಿಗಳ ಕುಂಡಲಿಯಲ್ಲಿ ರಾಜಮರ್ಯಾದೆಯ ಯೋಗಗಳಿರುತ್ತಿದ್ದವು. ಇಂದು ರಾಜರೂ ಇಲ್ಲ. ರಾಜಮರ್ಯಾದೆಯೂ ಇಲ್ಲ. ಇಂಥ ಯೋಗಗಳಿದ್ದವರಿಗೆ ಈಗ ಸರಕಾರದಿಂದ ಬಿರುದು ಬಾವಲಿಗಳೂ ಧನ ಸಹಾಯವೂ ದೊರೆಯುತ್ತಿರುವದನ್ನು ನೋಡುತ್ತೇವೆ. ಎಂದರೆ ಈಗಿನ ಕಾಲದಲ್ಲಿ ರಾಜಮರ್ಯಾದೆ ಎಂದಿರುವ ಸ್ಥಳದಲ್ಲಿ 'ಸರಕಾರ ಮರ್ಯಾದೆ" ಎಂಬ ಪದವು ಸಮಾನಾರ್ಥ ಸೂಚಕವಾಗುವದು. ಹೀಗೆ ಶಾಸ್ತ್ರದ ವ್ಯ ಹಿಂದಿನದಾದರೂ ಅದಕ್ಕೆ ಇಂದಿನ ವೇಷ ಕಟ್ಟಬೇಕಾಗಿದೆ. ಬುದ್ಧಿವಂತರಾದ ವಿದ್ಯಾರ್ಥಿಗಳು ಈ ಶಾಸ್ತ್ರದ ಅಧ್ಯಯನವನ್ನು ಮಾಡಿ ಹೊಸ ಹೊಸ ಪ್ರಯೋಗಗಳನ್ನು ನಡೆಸಿ, ಹೊಸ ಪದ್ಧತಿಗಳನ್ನೂ ಸಿದ್ಧಾಂತಗಳನ್ನೂ ಕಂಡು ಹಿಡಿಯಬೇಕು. ಇದರಿಂದ ಶಾಸ್ತ್ರಕ್ಕೂ ದೇಶಕ್ಕೂ ಕಲ್ಯಾಣ ಮಾಡಿದಂತಾದೀತು.

೩

# ಸಮಸ್ಯೆಗಳ ಕ್ಲಿಷ್ಟತೆ

**ಜ್ಯೋತಿಷಿಗಳು ಪ್ರತಿನಿತ್ಯವೂ ಎದುರಿಸಬೇಕಾದ ಸಮಸ್ಯೆಗಳ ನೋಟ-ಆಧುನಿಕ ಸಮಾಜದಲ್ಲಿ ಬರುವ ಕ್ಲಿಷ್ಟ ಹಾಗೂ ಸೂಕ್ಷ್ಮ ಪ್ರಶ್ನೆಗಳು— ಇವೆಲ್ಲವುಗಳನ್ನು ಹೇಗೆ ಎದುರಿಸಬೇಕು? ಇವೆಲ್ಲವೂ ಈ ಪ್ರಕರಣದಲ್ಲಿವೆ.**

ಫಲಜ್ಯೋತಿಷ್ಯದಲ್ಲಿ ಆಸಕ್ತಿಯುಳ್ಳ ಪೃಚ್ಛಕರ ಪ್ರಕಾರಗಳು ಹಾಗೂ ಅವರೊಡನೆ ಜ್ಯೋತಿಷಿಗಳು ಹೇಗೆ ವರ್ತಿಸಬೇಕು?— ಫಲಜ್ಯೋತಿಷ್ಯದಲ್ಲಿ ಸಂಶಯಾತ್ಮಕ ಮನೋವೃತ್ತಿಯುಳ್ಳ ಪೃಚ್ಛಕರು ಹಾಗೂ ಜ್ಯೋತಿಷ್ಯ ಶಾಸ್ತ್ರದ ಬಗೆಗೇ ಆಕ್ಷೇಪಣೆಗಳನ್ನು ಹೊರಿಸುವವರ ಸಮಸ್ಯೆಗಳನ್ನು ಬಗೆಹರಿಸುವುದರೊಡನೆ ಅವರಲ್ಲಿ ಫಲಜ್ಯೋತಿಷ್ಯ ಶಾಸ್ತ್ರದ ಬಗ್ಗೆ ನಂಬಿಕೆ ಹುಟ್ಟಿಸಲು ಯಾವ ವಿಧವಾಗಿ ಅವರನ್ನು ಸಮಾಧಾನಗೊಳಿಸಬೇಕೆಂಬ ಸೂಕ್ಷ್ಮ ವಿಷಯಗಳ ವಿಶ್ಲೇಷಣಾತ್ಮಕ ಪರಿಶೀಲನೆಯನ್ನು ಇಲ್ಲಿಯ ತನಕ ಮಾಡಿದ್ದಾಯಿತು.

ಈ ಅಧ್ಯಾಯದಲ್ಲಿ ಫಲಜ್ಯೋತಿಷ್ಯ ಶಾಸ್ತ್ರಜ್ಞ ಯಾವ ವಿಧವಾದ ಕ್ಲಿಷ್ಟ ಸಮಸ್ಯೆಗಳನ್ನು, ವಿಚಿತ್ರ ಸನ್ನಿವೇಶಗಳನ್ನು ತನ್ನ ದೈನಂದಿನ ಉದ್ಯೋಗಾವಧಿಯಲ್ಲಿ ಎದುರಿಸಬೇಕಾಗುತ್ತದೆ, ಹಾಗೂ ಆಯಾ ಸನ್ನಿವೇಶಗಳನ್ನು ಹೇಗೆ ಎದುರಿಸಿದರೆ ಜ್ಯೋತಿಷ್ಯ ಶಾಸ್ತ್ರಜ್ಞರು ತಮ್ಮ ಉದ್ಯೋಗಕ್ಕೆ ಮನ್ನಣೆ ತಾವೇ ತೋರಿಸಿದಂತಾದೀತು ಎಂಬುದನ್ನು ವಿವೇಚಿಸೋಣ.

ನವೀನ ವಿಜ್ಞಾನವು ಮಾನವನ ಊಹೆಯನ್ನೇ ಮೀರಿ ಪ್ರಗತಿ ಹೊಂದುತ್ತಿದೆ. ಇಂದು ವಿಜ್ಞಾನ ಶಾಸ್ತ್ರದಲ್ಲಿ ಆಧಾರವಾಗಿದ್ದ ಸಾಮಾನ್ಯ ನಿಯಮಗಳು ಕೆಲಕ್ಷಣಗಳಲ್ಲಿ ಬದಲಾಗಿ ಹೋದ ಉದಾಹರಣೆಗಳಿಗೇನೂ ಕಡಿಮೆಯಿಲ್ಲ. ವಿಜ್ಞಾನವು ಹೀಗೆ ಬದಲಾಗುತ್ತಿದ್ದಂತೆ ಅದರ ಪ್ರಭಾವವೂ ಸಮಾಜದ ಮೇಲೆ ಪ್ರತಿಬಿಂಬಿತವಾಗಿ ನಮ್ಮೆಲ್ಲರ ಜೀವನದ ದೃಷ್ಟಿ, ಸಮಸ್ಯೆಗಳ ಬಗೆಯೇ ಬದಲಾಗಿ ಹೋಗುತ್ತಿದೆ. ಗ್ರಹ-ಉಪಗ್ರಹಗಳನ್ನು ಸೇರಿಸುವಷ್ಟು ವಿಜ್ಞಾನ ಪ್ರಗತಿ ಹೊಂದಿದೆ, ಹೀಗಿರುವಾಗ ಫಲಜ್ಯೋತಿಷ್ಯ ಶಾಸ್ತ್ರಜ್ಞ ತನಗೆ ಬರುವ

ಸಮಸ್ಯೆಗಳನ್ನು ಹೇಗೆ ಬಗೆಹರಿಸಬೇಕು ? ಜ್ಯೋತಿಷಿಯು ಸಮಾಜ ಪ್ರಪಂಚದ, ಪ್ರಗತಿಯೊಡನೆ ತನ್ನ ದೃಷ್ಟಿಯನ್ನು ಬದಲಿಸುತ್ತ ಹೋಗಿ ಜನಸಾಮಾನ್ಯರ ಸಮಸ್ಯೆಗಳಿಗೆ ಪರಿಹಾರ ನೀಡಿ ಅವರಿಗೆ ಮಾರ್ಗದರ್ಶನ ಒದಗಿಸುವ ವಿಶಿಷ್ಟ ಸ್ಥಾನವನ್ನು ಹೊಂದಿರುವಾಗ ಅವನು ಯಾವ ವಿಧದಲ್ಲಿ ವರ್ತಿಸಬೇಕು ? ಅವನಿಗೆ ಆಧುನಿಕ ಯುಗದಲ್ಲಿ ಪೃಚ್ಛಕರಿಗೆ ಉದ್ಭವಿಸುವ ಸಮಸ್ಯೆಗಳಿಗೆ ನವೀನ ರೀತಿಯಲ್ಲಿ ಉತ್ತರಿಸುವ ಶಕ್ತಿ ಹೇಗೆ ಬಂದೀತು ? ಹೊಸ ಹೊಸದಾಗಿ ಉದ್ಭವಿಸುವ ಸಮಸ್ಯೆಗಳಿಗೆ ನಮ್ಮ ಶಾಸ್ತ್ರದಲ್ಲಿ ಆಧಾರ ಸಹಿತವಾಗಿ ಉತ್ತರಿಸಲು ಬಂದೀತೇ ? ಎಂಬುದರ ಕುರಿತು ವಿವೇಚಿಸಬೇಕಾಗುತ್ತದೆ. ಉದಾಹರಣೆಗೆ ವಿದ್ಯಾರ್ಥಿಯೊರ್ವನು ಅಣುಶಾಸ್ತ್ರ ವಿಜ್ಞಾನವನ್ನು ಐಚ್ಛಿಕ ವಿಷಯವಾಗಿ ತೆಗೆದುಕೊಳ್ಳಲೋ ಅಥವಾ ರಾಸಾಯನಿಕ ಶಾಸ್ತ್ರ ಆರಿಸಲೋ ಎನ್ನುವಂತಹ ಅತಿ ಸೂಕ್ಷ್ಮ ಪ್ರಶ್ನೆಗಳಿಗೆ ಜ್ಯೋತಿಷಿಯು ನಮ್ಮ ಸಂಪ್ರದಾಯ ಶಾಸ್ತ್ರದಲ್ಲಿ ಇದಕ್ಕೆ ಆಧಾರ ದೊರೆಯುವುದಿಲ್ಲವೆಂದು ಹೇಳಿ ಬಂದ ವಿದ್ಯಾರ್ಥಿ ಪೃಚ್ಛಕನನ್ನು ನಿರಾಶೆಗೊಳಿಸಿ ಅವನನ್ನು ತಿರುಗಿ ಕಳಿಸಬಹುದೇ ? ಆಧುನಿಕ ಯುಗದಲ್ಲಿ ಬರುವ ಸಮಸ್ಯೆಗಳಿಗೆ ಸಾವಿರಾರು ವರ್ಷಗಳ ಹಿಂದೆ ಬರೆದ ಜ್ಯೋತಿಷ್ಯ ಗ್ರಂಥಗಳಲ್ಲಿ ಹೇಗೆ ಆಧಾರ ದೊರೆತೀತು ? ಹಳೆಯ ಗ್ರಂಥಗಳಲ್ಲಿ ಆಧಾರವಿಲ್ಲವೆಂಬ ಮಾತ್ರಕ್ಕೆ ನವೀನ ಪ್ರಜ್ಞೆಯುಳ್ಳ ಜ್ಯೋತಿಷಿಗಳು ಈ ಯುಗಕ್ಕೆ ಸಂಬಂಧಿಸಿ ಬರುವ ಪ್ರಶ್ನೆಗಳನ್ನು ಕಡೆಗಣಿಸುವುದೇ ? ಮುಂತಾದ ಅನೇಕಾನೇಕ ಪ್ರಶ್ನೆಗಳು ಉಂಟಾಗುವವು. ಪ್ರಗತಿಪಥದಲ್ಲಿ ಕ್ಷಣಕ್ಷಣಕ್ಕೂ ಬದಲಾಗುತ್ತ ಸಾಗಿರುವ ಈ ಜಗತ್ತಿನ ವೇಗವನ್ನು ಸರಿಯಾಗಿ ಹೋಗುವದನ್ನು ಜ್ಯೋತಿಷಿಯು ಕಲಿಯಬೇಕು. ಅವನು ನವೀನ ವಿಜ್ಞಾನದ ಪ್ರಗತಿಯೊಡನೆ ತನ್ನ ವೈಜ್ಞಾನಿಕ ದೃಷ್ಟಿಯನ್ನೂ ವಿಸ್ತರಿಸಿಕೊಳ್ಳಬೇಕು. ಇತರರ ಸಮಸ್ಯೆಗಳನ್ನು ಜ್ಯೋತಿಷಿಯು ಬಗೆಹರಿಸಬೇಕಾದರೆ ಆ ಸಮಸ್ಯೆಗಳ ಜ್ಞಾನ ಪ್ರಥಮತಃ ಜ್ಯೋತಿಷಿಗೆ ಇದ್ದು ನಂತರ ಅವನು ಅವುಗಳನ್ನು ಮನನ ಮಾಡಿ ತನ್ನ ಶಾಸ್ತ್ರಕ್ಕನುಗುಣವಾಗಿ ಅದಕ್ಕೆ ಪರಿಹಾರವನ್ನು ನೀಡಬೇಕು. ಪೃಚ್ಛಕರ ಸಮಸ್ಯೆಗಳಾವವೂ ಅವನಿಗೆ ಕ್ಷುಲ್ಲಕವೆಂದು ತೋರಬಾರದು. ಒಬ್ಬ ಕ್ರೀಡಾಪಟು ಪೃಚ್ಛಕ ತನಗೆ ಆ ವರ್ಷ ಕ್ರಿಕೆಟ್ ತಂಡದಲ್ಲಿ ರಾಜ್ಯವನ್ನು ಪ್ರತಿನಿಧಿಸುವ ಅವಕಾಶ ದೊರೆತೀತೇ ? ಎಂದು ಪ್ರಶ್ನಿಸಿದ್ದಾಗಲೀ, ತಾನು ಈ

ಆಟದಲ್ಲಿ ಶತಕ ಹೊಡೆಯಲು ಸಾಧ್ಯವೇ ಎಂದಾಗಲೀ ಪ್ರಶ್ನಿಸಿದರೆ ಅದಕ್ಕೆ ಉತ್ತರ ಕೊಡುವುದು ಜ್ಯೋತಿಷಿಯ ಕರ್ತವ್ಯ. ಜ್ಯೋತಿಷಿಯು ತನ್ನ ಪೃಚ್ಛಕರ ಮಾರ್ಗದರ್ಶಿಯಲ್ಲವೇ ? ಈ ಪ್ರಶ್ನೆಗಳನ್ನು ಉತ್ತರಿಸಬೇಕಾದರೆ ಫಲಜ್ಯೋತಿಷಿಗಾದರೂ ಕ್ರಿಕೆಟ ಅಂಪರೇನು, ಶತಕವೆಂದರೇನು ಎಂಬ ವಿಷಯಗಳ ಜ್ಞಾನ ಇರಬೇಕಾಗುತ್ತದೆ. ಹೀಗೆಯೇ ಅನೇಕ ಮಾದರಿಯ ಪ್ರಶ್ನೆಗಳು ಬರಬಹುದು. ಅನೇಕ ಸಮಸ್ಯೆಗಳು ಉದ್ಭವಿಸಬಹುದು. ಇವನ್ನು ಯಶಸ್ವಿಯಾಗಿ ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಉತ್ತರಿಸಲು ಜ್ಯೋತಿಷಿಗೆ ಜ್ಯೋತಿಷ್ಯ ಶಾಸ್ತ್ರದ ಜ್ಞಾನವಷ್ಟೇ ಅಲ್ಲದೇ ಎಲ್ಲ ಶಾಸ್ತ್ರಗಳ, ಎಲ್ಲ ವಿಷಯಗಳ ಬಗ್ಗೆ ಜ್ಞಾನ ಬೇಕಾಗುತ್ತದೆ. ಸಮಾಜದಲ್ಲಿ ನಡೆಯುವ ಎಲ್ಲ ಆಗುಹೋಗುಗಳ ಪ್ರಚಲಿತ ರಾಜಕೀಯದ ಪ್ರತಿಕ್ಷಣದ ಬದಲಾವಣೆಗಳು ಮುಂತಾದ ಎಲ್ಲ ವಿಷಯಗಳ ಜ್ಞಾನ ಬೇಕಾಗುತ್ತದೆ. ಸಾಂಪ್ರದಾಯಿಕ ಜ್ಯೋತಿಷಿಗಳಂತೆ ಆಧಾರವಿಲ್ಲವೆಂಬ ಪಲ್ಲವಿಯನ್ನು ಹಾಡಿ ತಮ್ಮ ಗೋರಿಯನ್ನು ತಾವೇ ಮಾಡಿಕೊಳ್ಳುವ ಪ್ರಸಂಗಕ್ಕೆ ಎಡೆಗೊಡಬಾರದು. ಫಲಜ್ಯೋತಿಷ್ಯ ಶಾಸ್ತ್ರವನ್ನು ನಿಂತ ನೀರನ್ನಾಗಿ ಮಾಡದೇ ಹರಿಯುವ ನೀರಾಗಿ ಮಾಡಬೇಕು, ಅನುಭವದ ಆಧಾರದ ಮೇಲೆ ಸಮಸ್ಯೆಗಳನ್ನು ಬಗೆಹರಿಸಬೇಕು. ಪ್ರತಿ ಜ್ಯೋತಿಷಿಯೂ "ವರಾಹ ಮಿಹಿರ"ನೇ ಆಗುವ ಯತ್ನ ಎಲ್ಲೆಡೆ ನಡೆಯಬೇಕು.

ಫಲಜ್ಯೋತಿಷ್ಯ ಶಾಸ್ತ್ರ ಪ್ರಾಚೀನತೆಯೊಡನೆ ಹಾಳುಬಿದ್ದ ಶಾಸ್ತ್ರವಲ್ಲ. ವಿಜ್ಞಾನದಂತೆ ಜೀವಂತವಾಗಿ ಪ್ರಗತಿ ಹೊಂದುವ ಶಾಸ್ತ್ರವೆಂದು ಸಿದ್ಧಮಾಡಿ ತೋರಿಸುವ ಪ್ರವೃತ್ತಿ ಪ್ರತಿಯೊಬ್ಬ ಜ್ಯೋತಿಷಿಯಲ್ಲಿ ಉದ್ಭವವಾಗಬೇಕು

ಜ್ಯೋತಿಷಿಯು ಅನೇಕ ವಿಚಿತ್ರವಾದ ಪ್ರಶ್ನೆಗಳನ್ನು ತನ್ನ ಪೃಚ್ಛಕರಿಂದ ಎದುರಿಸಬೇಕಾಗುತ್ತದೆ. ಪ್ರಶ್ನಾರ್ಥಿಯು ಇಂತಹದೇ ಪ್ರಶ್ನೆಗಳನ್ನು ಕೇಳಬೇಕೋ, ಬೇಡವೋ ಎನ್ನುವದನ್ನು ಕೂಡ ಕೆಲವೊಮ್ಮೆ ಅರಿಯುವದಿಲ್ಲ. ಅವನು ಯಾವ ಪ್ರಶ್ನೆಯೇ ಕೇಳಲಿ, ಅದು ಯಾವವಿಷಯಕ್ಕೇ ಸೇರಲಿ ಅದಕ್ಕೆ ಸಮಾಧಾನಕರವಾದ, ಸಮರ್ಪಕವಾದ ಸಮಂಜಸವಾದ ಉತ್ತರವನ್ನು ಕೊಡಬೇಕಾಗುತ್ತದೆ. ಇದು ಬಹಳ ಕಠಿಣವಾದ ಕೆಲಸ. ಅದರಲ್ಲಿಯೂ ಆಧುನಿಕ ಪ್ರಶ್ನೆಗಳಿಗೆ ಉತ್ತರ ಕೊಡುವದು ಮತ್ತಿಷ್ಟು ಕಠಿಣವಾದ ಕೆಲಸ

ಇಂತಹ ಪರಿಸ್ಥಿತಿಯ ಕಲ್ಪನೆಗಳನ್ನು ಮಾಡಿಕೊಡಲು ನನ್ನ ಬಳಿ ಬಂದ ಕೆಲ ಪೃಚ್ಛಕರ ಕೆಲ ಉದಾಹರಣೆಗಳನ್ನು ಇಲ್ಲಿ ಚಿತ್ರಿಸಿದರೆ ಈ ಶಾಸ್ತ್ರದ ಕಾಠಿಣ್ಯದ ಕಲ್ಪನೆ ಬರುವದು.

ಉದಾಹರಣೆ ೧ :— ಎಲ್ಲ ಕ್ಷೇತ್ರಗಳಲ್ಲಿ ಕೆಲಸಮಾಡುವವರಿಗೆ ಸಮಸ್ಯೆಗಳಿರುವಂತೆ ರಾಜಕಾರಣಿಗಳಿಗೂ ಸಮಸ್ಯೆಗಳಿರುತ್ತವೆಯಲ್ಲವೇ ? ರಾಜಕಾರಣಿಯ ಸಮಸ್ಯೆಗಳು ಸಮಯ, ಸಂದರ್ಭಗಳಿಗನುರೂಪವಾಗಿ ಬದಲಾಗಿರುವವು. ಚುನಾವಣೆಗಳು ಸಮೀಪಿಸಿದಾಗಂತೂ ಅವರ ಸಮಸ್ಯೆಗಳು ಬೃಹದಾಕಾರವಾಗುತ್ತವೆ. ಚುನಾವಣೆಗಳ ಜಂಜಾಟದಲ್ಲಿ ಸಿಕ್ಕ ಓರ್ವ ರಾಜಕಾರಣಿಯು ತನ್ನ ವಿಶಿಷ್ಟ ಸಮಸ್ಯೆಗಳ ಪರಿಹಾರಕ್ಕೆಂದು ಜ್ಯೋತಿಷಿಯ ಬಳಿಗೆ ಬಂದಾಗ ಪ್ರಶ್ನೆಗಳ ಸುರಿಮಳೆಯನ್ನೇ ಸುರಿಸುತ್ತಾನೆ. "ನಾನು ಸ್ಥಾನಿಕ ಕಾರ್ಪೋರೇಶನ್ ಚುನಾವಣೆಯಲ್ಲಿ ಕಾರ್ಪೋರೇಟರರ ಸ್ಥಾನಕ್ಕೆ ಸ್ಪರ್ಧಿಸಬೇಕೆಂದಿದ್ದೇನೆ ಸ್ಪರ್ಧಿಸಲೊ? ಎಂದು ತನ್ನ ಪ್ರಶ್ನೆಗಳ ಮಾಲಿಕೆಯನ್ನು ಪ್ರಾರಂಭಿಸುತ್ತಾನೆ. ಜ್ಯೋತಿಷಿಯು ಈ ರಾಜಕಾರಣಿಯ ಜಾತಕವನ್ನು ಪರಿಶೀಲಿಸಿ ಸ್ಪರ್ಧಿಸಿರಿ ಯಶಸ್ಸು ದೊರೆಯುತ್ತದೆಂದು ಹೇಳುವನೆಂದು ಭಾವಿಸೋಣ. ಆಗ ರಾಜಕಾರಣಿಯ ಮರುಪ್ರಶ್ನೆ ಸಿದ್ಧವಾಗಿಯೇ ಇರುತ್ತದೆ.— "ನಾನು ಅವಿರೋಧವಾಗಿ ಆರಿಸಿ ಬರಲು ಸಾಧ್ಯವೇ? ಇಲ್ಲವೇ ಸ್ಪರ್ಧಿಸಿದರೆ ಮಾತ್ರ ಯಶಸ್ಸು ದೊರೆಯುವದೋ?" ಎಂದು. ಆಗ ಜ್ಯೋತಿಷಿಯು ಅವಿರೋಧದ ಆಯ್ಕೆ, ಸ್ಪರ್ಧಾತ್ಮಕ ಯಶಸ್ಸು ಎಂಬ ಎರಡು ಭಾಗಗಳಲ್ಲಿಯೂ ಅವನ ಜಾತಕದ ಗ್ರಹಮಾನಗಳಿಂದ ಫಲಾಫಲಗಳನ್ನು ವಿಂಗಡಿಸಿ, ತೂಗಿನೋಡಿ ಉತ್ತರಿಸಬೇಕಾಗುವದು. ಈ ಸಮಸ್ಯೆಗೆ "ಸ್ಪರ್ಧೆಯಿಂದ ಯಶಸ್ಸು' ಎಂದು ಜ್ಯೋತಿಷಿಯು ಉತ್ತರಿಸಿದರೆ ತಕ್ಷಣ ಅವನು ಪುನಃ ಕೇಳುತ್ತಾನೆ? "ಸ್ಪರ್ಧೆ ನೇರವಾಗಿ ಆಗುವದೋ ? ತ್ರಿಕೋಣವೋ ? ನಾಲ್ಕು ಸ್ಪರ್ಧಾಳುಗಳೋ ? ಎಂದು. ಇದು ಮಾತ್ರ ಅತಿ ಸೂಕ್ಷ್ಮ ಪ್ರಶ್ನೆ ರಾಜಕಾರಣಿಗೆ ಮಾತ್ರ ಈ ಪ್ರಶ್ನೆಗೆ ಉತ್ತರ ಬೇಕೇಬೇಕು. ಏಕೆಂದರೆ ಅವನು ತನ್ನ ಬೊಕ್ಕಸದ ಬಲದ ಪರಿಶೀಲನೆ ಮಾಡಿ ಸ್ಪರ್ಧಿಸಲು ನಿರ್ಧರಿಸಬೇಕಾದರೆ ಈ ಅಂಶವು ಅವನಿಗೆ ಮುಖ್ಯವಾದದ್ದು. ಇಂತಹ ಕ್ಲಿಷ್ಟ ಪರಿಸ್ಥಿತಿಯಲ್ಲಿ ಮತ್ತೆ ಗ್ರಹಮಾನ, ಗ್ರಹಯೋಗಗಳ ಸೂಕ್ಷ್ಮ ವಿವೇಚನೆಮಾಡಿ ಈ ಅಂಶವನ್ನು ಅವನಿಗೆ ವಿವರಿಸಬೇಕು.

ಆಗ ಆ ಅಭ್ಯರ್ಥಿಯು ತಾನು ಸ್ಪರ್ಧಿಸಿ ಜಯ-ಶಾಲಿಯಾದೆನೆಂದೇ ಇಷ್ಟ ರೊಳಗೆ ಭಾವಿಸುತ್ತಾನೆ. ಆಗ ಅವನ ಆಶಾಪಾಶವು ಮೇಯರ, ಡೆಪ್ಯುಟಿ ಮೇಯರ, ಪಾರ್ಟಿ ವ್ಹಿಪ್, ಮುಂತಾದ ಉಚ್ಚ ಪದವಿಗಳ ಕಡೆಗೆ ಎಳೆಯುತ್ತಿ ರುತ್ತದೆ. ಅವನು ತನ್ನ ಕುತೂಹಲ ಹತ್ತಿಕ್ಕಿಕೊಳ್ಳಲಾರದೇ ಕೇಳಿಯೇ ಬಿಡುತ್ತಾನೆ. "ನಾನು ಮೇಯರ ಆಗುವೆನೋ ಇಲ್ಲವೇ ಡೆಪ್ಯುಟಿ ಮೇಯರ ನಾಗುವೆನೋ" ಎಂದು ಕೇಳಿ "ಅವುಗಳ ಲಕ್ಷಣವಿಲ್ಲ" ಎಂದು ಜ್ಯೋತಿಷಿ ನುಡಿದರೆ "ನಾನು ಪಾರ್ಟಿ ವ್ಹಿಪ್ ಆದರೂ ಆಗಲು ಸಾಧ್ಯವೆ?" ಎಂದು ಕೇಳುತ್ತಾನೆ. ಈ ಎಲ್ಲ ಪ್ರಶ್ನೆಗಳಿಗೂ ಜಾತಕದ ಸೂಕ್ಷ್ಮಾ ಸೂಕ್ಷ್ಮ ವಿವೇಚನೆ, ಪರಿಶೀಲನೆ, ಮಾಡುವದರೊಡನೆ ಈ ಎಲ್ಲ ರಾಜಕೀಯ ಸ್ಥಾನಮಾನಗಳ ಕಲ್ಪನೆ ಜ್ಯೋತಿಷಿಗೆ ಬೇಕಾಗುತ್ತದೆ. ಈ ಎಲ್ಲ ಪ್ರಶ್ನೆಗಳು ಮುಗಿದ ಮೇಲೆ ಆ ರಾಜಕಾರಣಿಗೆ ಒಂದು ಸಂಶಯ ಬರುತ್ತದೆ. ಅದು ತನ್ನ ಪಕ್ಷದ ಟಿಕೇಟಿನ ಬಗ್ಗೆ. ತಾನು ಈ ಪ್ರಶ್ನೆಯನ್ನು ಮೊದಲೇ ಕೇಳಬೇಕಾಗಿತ್ತು ಎಂದು ಅವನಿಗೆ ಆಗ ಭಾಸವಾಗುತ್ತದೆ. ಆದರೆ ಅವನು ಅದನ್ನು ನಂತರ ಕೇಳಲು ಹಿಂಜರಿ ಯುವದಿಲ್ಲ ಏಕೆಂದರೆ ಅವನ ಯಶಾಪಯಶ, ಪಕ್ಷದ ಬಲಾಬಲಗಳ ಜೊತೆಗೆ ತನಗೆ ಪಕ್ಷದ ಟಿಕೇಟು ದೊರೆಯುವದರ ಮೇಲೆ ಅವಲಂಬಿಸಿರುತ್ತದೆ. ಅವನ ಈಗಿನ ಪ್ರಶ್ನೆ ಹೀಗಿರುತ್ತದೆ. "ಜ್ಯೋತಿಷಿಗಳೇ ಒಂದು ವಿಷಯ ಮರೆತೆ, ನನಗೆ ನನ್ನ ಪಕ್ಷದ ಟಿಕೇಟು ದೊರೆತೀತೆ?" ಎಂದು ಇದನ್ನು ಉತ್ತರಿಸಿದ ನಂತರ ಮತ್ತೊಂದು ಪ್ರಶ್ನೆ ಅವನಿಗೆ ಹೊಳೆಯುತ್ತದೆ. "ನೋಡ್ರೀ ಜ್ಯೋತಿಷಿ ಗಳೇ ನನಗೆ ಒಂದೇ ಒಂದು ಟಿಕೇಟು ಕೊಡಬಹುದು. ಅದು ನನ್ನ ಪಕ್ಷದ ಕಟ್ಟಳೆ. ಆದ್ದರಿಂದ ನಾನು ಈಗಲೇ ಸರಿಯಾಗಿ ಅದರ ಬಗ್ಗೆ ನಿರ್ಧರಿಸ ಬೇಕು. ತಾಲೂಕಾ ಅಭಿವೃದ್ಧಿ ಮಂಡಲದ (T. D. B.) ಸದಸ್ಯತ್ವದ ಟೀಕೇಟು ಕೇಳಲೋ ಅಥವಾ ಕಾರ್ಪೋರೇಟರ ಸ್ಥಾನಕ್ಕೆ ಕೇಳಲೋ ಇಲ್ಲವೇ ವಿಧಾನ ಸಭೆಗೆ ನನ್ನ ಬೇಡಿಕೆ ನೀಡಲೋ" ಎನ್ನುವನು. ಇದು ಅವನಿಗೆ ಒಂದು ದೊಡ್ಡ ಸಮಸ್ಯೆಯೇ ನಿಜ, ಏಕೆಂದರೆ ಅವನಿಗೆ ಒಂದೇ ಒಂದು ಟಿಕೇಟು ಲಭಿಸುತ್ತದೆ, ಅದರಲ್ಲಿ ಅವನು ತಪ್ಪು ನಿರ್ಧಾರ ತೆಗೆದುಕೊಂಡರೆ ಅವನ ಸಂಪೂರ್ಣ ರಾಜಕೀಯ ಜೀವನದ ಸಮಾಧಿಯಾಗಬಹುದು. ಅವನು ಬೃಹದಾಕಾಂಕ್ಷಿಯುಳ್ಳ ಓರ್ವ ಯುವಕ ರಾಜಕಾರಣಿ ಆದರೆ ಜ್ಯೋತಿಷ್ಯದಲ್ಲಿ ಸಾಧಾರಣವಾಗಿ ರಾಜಕಾರಣಿಯ ಯೋಗಗಳನ್ನು ನಿರ್ಧರಿಸುವದು ಮಾತ್ರ

ಸುಲಭ. ಆದರೆ T. D. B. ವಿಧಾನ ಸಭೆ ಕಾರ್ಪೋರೇಶನ್ ಸದಸ್ಯರ ಯೋಗಗಳನ್ನು ವಿಂಗಡಿಸುವದು ನಂತರ ಮೇಯರ ಡೆಪ್ಯುಟಿ ಮೇಯರ. ಪಾರ್ಟಿ ವ್ಹಿಪ್ ಮೊದಲಾದ ರಾಜಕೀಯ ಪದವಿಗಳ ಬಗ್ಗೆ ನಿರ್ಧರಿಸುವದು ಕಠಿಣವೂ ಸೂಕ್ಷ್ಮವೂ ಹಾಗೂ ಜಟಿಲವೂ ಆಗಿರುತ್ತದೆ. ಆದರೂ ಜ್ಯೋತಿಷಿಯು ತನ್ನ ಶಾಸ್ತ್ರಜ್ಞಾನದ ನವೀನ ಉಲ್ಲೇಖಿಸಗಳ Interpretation) ಅನುಭವಗಳ ಆಧಾರದ ಮೇಲೆ ಈ ಎಲ್ಲ ಸಮಸ್ಯೆಗಳನ್ನು ಬಗೆಹರಿಸಬೇಕು. ಹಳೆಯ ಶಾಸ್ತ್ರದ ಆಧಾರಗಳಿಗಾಗಿ ಹುಡುಕುತ್ತಿದ್ದರೆ ಸಮಸ್ಯೆಗಳು ಸಮಸ್ಯೆಗಳಾಗಿಯೇ ಉಳಿಯುತ್ತವೆ.

**ಉದಾಹರಣೆ ೩ :** — ರಾಜಕಾರಣಿಗಳ ಸಮಸ್ಯೆಗಳ ಸರಣಿ ಹೀಗಿದ್ದರೆ ವಿದ್ಯಾರ್ಥಿಗಳ ಪ್ರಶ್ನೆಯ ರೀತಿಯೇ ಬೇರೆ. ವಿದ್ಯಾರ್ಥಿಗಳಲ್ಲಿಯೂ ನಾನಾ ವಿಧವಾದ ವಿದ್ಯಾರ್ಥಿಗಳಿರುತ್ತಾರೆಂಬುದು ನಿಜ. ಬೀದಿಯ ಕಾಮಣ್ಣಗಳ (Road Romeos) ಮನಸ್ಸು ಯಾವದಾದರೂ ಬಣ್ಣದ ಚಿಟ್ಟೆಗಳ ಕಡೆಗೇ ಇದ್ದರೆ ಭವಿತವ್ಯದ ಬಗ್ಗೆ ಮಹಾದಾಶೆಯನ್ನೇ ವಹಿಸಿಕೊಂಡಿರುವ ವಿದ್ಯಾರ್ಥಿಗಳ ಮನಸ್ಸು ಯಾವಾಗಲೂ ತಪ್ಪ ಓದು, ಪರೀಕ್ಷೆಗಳು. ತಾವು ಆರಿಸಿಕೊಳ್ಳಬೇಕಾದ ಕೋರ್ಸ್. ವಿಷಯ, ಮುಂದೆ ತಾವು ಹೊಂದಬಯಸುವ ಪದವಿ (Degree) ಇವುಗಳ ಬಗೆಗೆ ಇರುತ್ತದೆ. ಪರೀಕ್ಷೆಗಳು ಸಮೀಪಿಸುತ್ತಿದ್ದಂತೆ ಪುಸ್ತಕ ಕ್ರಿಮಿಗಳು ಜ್ಯೋತಿಷಿಗಳ ಕಡೆಗೆ ಧಾವಿಸುತ್ತಾರೆ. ಅವರ ಪ್ರಶ್ನೆಗಳ ಸರಣಿ ಹೀಗೆ ಪ್ರಾರಂಭವಾಗುತ್ತದೆ; "ನನಗೆ ಈ ಸಲದ ಪರೀಕ್ಷೆಯಲ್ಲಿ (First Class) ದೊದಲನೇ ವರ್ಗ ಲಭಿಸುವುದೋ? ಇಲ್ಲವಿದ್ದರೆ ನಾನು (Drop) ತೆಗೆದುಕೊಳ್ಳಲೋ ? " ಎಂದು ಇವು ಅವನಿಗೆ ಬಹು ಮಹತ್ವದ ಪ್ರಶ್ನೆಗಳು. ಫಲಜ್ಯೋತಿಷ್ಯ ಶಾಸ್ತ್ರದ ನಿಯಮಗಳನ್ವಯ ಓರ್ವ ವಿದ್ಯಾರ್ಥಿಯ ಜಾತಕವನ್ನು ಪರಿಶೀಲಿಸಿ ಅವನು ಉತ್ತೀರ್ಣನಾಗುವನೋ ಇಲ್ಲವೋ ಎಂದು ಹೇಳುವದು ಅತಿ ಸುಲಭವಾದ ಕೆಲಸ. ಆದರೆ ಈ ಉತ್ಕಟಾಕಾಂಕ್ಷೆಯುಳ್ಳ ವಿದ್ಯಾರ್ಥಿಗೆ ಇಷ್ಟು ಹೇಳಿದರೆ ಸಾಲದು ಅವನಿಗೆ ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿ ದೊರೆಯದಿದ್ದರೆ ಅವನು ಆ ಸಲ ಡ್ರಾಪ್ ತೆಗೆದುಕೊಳ್ಳುವ ಹವಣಿಕೆಯನ್ನು ಹೊಂದಿರುತ್ತಾನೆ. ಈ ಸಮಸ್ಯೆಯನ್ನು ಬಗೆಹರಿಸಲು ಜ್ಯೋತಿಷಿಗೆ "ಡ್ರಾಪ್" ಎಂದರೇನು?ಎಂಬ ಪರೀಕ್ಷೆಗೆ ಸಂಬಂಧಪಟ

ಎಲ್ಲ ವಿಷಯಗಳನ್ನು ಅರಿತಿರಬೇಕಾಗುತ್ತದೆ. ಪರೀಕ್ಷೆಯಲ್ಲಿ ಕೊಡುವ ಬೇರೆಬೇರೆ ದರ್ಜೆ ರ್‍ಯಾಂಕುಗಳು ಮೊದಲಾದ ವಿಷಯಗಳನ್ನು ತಿಳಿದುಕೊಳ್ಳಬೇಕಾಗುತ್ತದೆ. ಇವುಗಳನ್ನು ಅರಿತು ಜ್ಯೋತಿಷ್ಯ ಶಾಸ್ತ್ರದಲ್ಲಿ ಈ ಎಲ್ಲ ವಿಭಾಗಗಳಿಗೂ ಯಾವ ಯಾವ ಗ್ರಹ, ಸ್ಥಾನ, ಯೋಗಗಳು ಇರಬೇಕೆಂದು ನಿರ್ಧರಿಸಬೇಕಾಗುತ್ತದೆ. ಯಾವನಾದರೂ ವಿದ್ಯಾರ್ಥಿ ತನಗೆ ಫಸ್ಟ್‌ಕ್ಲಾಸ ದೊರೆಯುವ ಯೋಗವಿಲ್ಲದಿದ್ದರೆ ತಾನು ಡ್ರಾಪ್ ತೆಗೆದುಕೊಳ್ಳುತ್ತೇನೆ, ಸರಿಯಾಗಿ ವಿವೇಚಿಸಿ ಮಾರ್ಗದರ್ಶನ ನೀಡಿ ಎಂದರೆ ಈ ಪ್ರಶ್ನೆಯನ್ನು ಅಸಡ್ಡಾಳ ಮನೋವೃತ್ತಿ (Silly-question) ಎಂದೆಣಿಸಬಾರದು. ಏಕೆಂದರೆ ಆ ವಿದ್ಯಾರ್ಥಿಗೆ ಈ ಪ್ರಶ್ನೆ ಬಹಳ ಮಹತ್ವದ್ದಾಗಿರುತ್ತದೆ. ಫಸ್ಟ್‌ಕ್ಲಾಸ ದೊರೆತ ವಿದ್ಯಾರ್ಥಿಗೆ ಮಾತ್ರ ಭಾಗ್ಯದ ಬಾಗಿಲು ತೆರೆದಿರುತ್ತದೆ. ಉದಾಹರಣೆಗೆ ಪಿ. ಯು. ಸಿ (P.U.C.) ಸಾಯನ್ಸ ವಿದ್ಯಾರ್ಥಿಗೆ ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿ ದೊರೆಯದಿದ್ದರೆ ಅವನಿಗೆ ಇಂಜನಿಯರಿಂಗ ಇಲ್ಲವೇ ಮೆಡಿಕಲ್ ಕಾಲೇಜುಗಳಲ್ಲಿ ಶಿಕ್ಷಣ ಪಡೆಯಲು ಪ್ರವೇಶ ದೊರೆಯುವದಿಲ್ಲ. ಇದರಂತೆಯೇ ಸ್ನಾತಕೋತ್ತರ (Post Graduate Courses) ಪದವೀ ಪರೀಕ್ಷೆಗಳಲ್ಲಿ ಕೊಡುವ ವಿದ್ಯಾರ್ಥಿಗಳಿಗೂ ಇದರ ಬಗೆಗೆ ಹೆಚ್ಚು ಆಸಕ್ತಿ ಇರುತ್ತದೆ. ಯಾಕೆಂದರೆ ಅವರಿಗೆ ಈ ಪರೀಕ್ಷೆಗಳಲ್ಲಿ ಫಸ್ಟ ಕ್ಲಾಸ ದೊರೆಯದಿದ್ದಲ್ಲಿ ಅದರಿಂದ ಅವರಿಗೆ ಮುಂದಿನ ಜೀವನಕ್ಕೆ ಯಾವ ಪ್ರಯೋಜನವೂ ಲಭಿಸುವದಿಲ್ಲ. ಅಷ್ಟೇ ಏಕೆ ಹಾಯಸ್ಕೂಲ ಮಾಸ್ತರ ಹುದ್ದೆ ದೊರೆಯುವುದೂ ಸಹ ಕಠಿಣವಾಗಬಹುದು. ಆದರೆ ಅದೇ ಅವನಿಗೆ ಪ್ರಥಮ ದರ್ಜೆ ದೊರೆತರೆ ಕಾಲೇಜಿನ ಪ್ರಾಧ್ಯಾಪಕನಾಗಬಹುದು, ಉಚ್ಚ ಹುದ್ದೆಗಳ ನವಕರಿ ಪಡೆಯಬಹುದು. ಪರದೇಶಗಳಲ್ಲಿ ಉಚ್ಚ ಶಿಕ್ಷಣ ಪಡೆಯಲು ಪ್ರಯತ್ನಿಸಬಹುದು. ಈ ಎಲ್ಲ ವಿಚಿತ್ರ ಪರಿಸ್ಥಿತಿಗಳ ಸೂತ್ರಗೊಂಬೆಯಾದ ವಿದ್ಯಾರ್ಥಿಗೆ ಜ್ಯೋತಿಷಿಯ ಸರಿಯಾದ ಮಾರ್ಗದರ್ಶನ ಬೇಕಾಗುತ್ತದೆ. ಫಸ್ಟ್‌ಕ್ಲಾಸ ದೊರೆಯುವದೋ ಇಲ್ಲವೋ ಎಂದು ಹೇಳುವದಕ್ಕಿಂತ ಅವನಿಗೆ ಡ್ರಾಪ್ ತೆಗೆದುಕೊಳ್ಳಬೇಕೋ ಬೇಡವೋ ಎಂದು ಸಲಹೆ ನೀಡುವದು ಜ್ಯೋತಿಷ್ಯ ಶಾಸ್ತ್ರದ ರೀತ್ಯಾ ಅತಿ ಕ್ಲಿಷ್ಟಕರವಾದ ಕೆಲಸ. ಆದರೆ ವಿದ್ಯಾರ್ಥಿಯ ಭವಿಷ್ಯತ್ತೇ ಈ ಸಮಸ್ಯೆಯನ್ನು ಸಮಂಜಸವಾಗಿ ಬಗೆಹರಿಸುವದರ ಮೇಲೆ ಆಧಾರವಾಗಿರುತ್ತದೆ. ಅವನಿಗೆ ಡ್ರಾಪ್ ತೆಗೆದು

ಕೊಳ್ಳಲು ಹೇಳಿದರೆ ವಿದ್ಯಾರ್ಥಿಯು ಒಂದು ವರ್ಷದ ಅಮೂಲ್ಯವಾದ ವೇಳೆಯನ್ನು ಪೋಲು ಮಾಡಲು ಹೇಳಿದಂತಾಗುತ್ತದೆ. ಆದರೆ ಅವನಿಗೆ ತನ್ನ ಮುಂದಿನ ಭವಿಷ್ಯತ್ತಿಗಾಗಿ (Prospects) ನಿಧಾನವಾಗಿ ಲಭಿಸಿದರೂ ಅಡ್ಡಿಯಿಲ್ಲ. ಹೇಗಾದರೂ ವರ್ಷ ಹಾಳಾದರೂ ಚಿಂತೆಯಿಲ್ಲ, ಲಭಿಸಬೇಕೆಂದು ಆಕಾಂಕ್ಷೆ ಇರುತ್ತದೆ. ಇಂತಹ ಸಮಯದಲ್ಲಿ ಜಾತಕದ ಅತಿ ಸೂಕ್ಷ್ಮ ವಿಶ್ಲೇಷಣಾತ್ಮಕ ವಿವೇಚನೆಯು ಅವಶ್ಯಕತೆ ಇರುತ್ತದೆ. ಇದು ಅತಿ ಕಠಿಣ ಸಮಸ್ಯೆ. ಆದರೂ ಇಂತಹ ಪ್ರಶ್ನೆಗಳನ್ನು ಕಡೆಗಣಿಸದೇ ಸರಿಯಾದ ಪರಿಹಾರವನ್ನು ಒದಗಿಸಿ ವಿದ್ಯಾರ್ಥಿಗಳ ಮಾರ್ಗದರ್ಶನ ನೀಡುವದು ಸದ್ಯದ ಯುಗದಲ್ಲಿ ಜ್ಯೋತಿಷಿಗಳ ಕರ್ತವ್ಯವಾಗಿರುತ್ತದೆ.

ವಿದ್ಯಾರ್ಥಿಗಳಿಂದ ಬರುವ ಅನೇಕ ವಿಧವಾದ ಕ್ಲಿಷ್ಟ ಸಮಸ್ಯೆಗಳಲ್ಲಿ ಇನ್ನೊಂದು ಬಗೆಯ ಸಮಸ್ಯೆಯನ್ನು ಇಲ್ಲಿ ವಿವೇಚಿಸೋಣ. ಐಚ್ಛಿಕ ವಿಷಯವನ್ನು (optional subjects) ಆರಿಸುವ ಪ್ರಶ್ನೆ ಒಂಬತ್ತನೇ (IX Std.) ಇಯತ್ತೆಯಿಂದಲೇ ಪ್ರಾರಂಭಿಸಿ, ಸ್ನಾತಕೋತ್ತರ ವಿಭಾಗ (Post Graduate Course) ನಂತರ ಸಂಶೋಧನೆಗಳ ಹಂತದಲ್ಲಿ ಸಹ (Ph. D.) ಇರುತ್ತದೆಂಬುದನ್ನು ಕಾಣಬಹುದು. ಒಂಬತ್ತನೇ ಇಯತ್ತೆಯಲ್ಲಿ ವಿಜ್ಞಾನ ತೆಗೆದುಕೊಳ್ಳಲೋ ? ಮಾನವಶಾಸ್ತ್ರ (Arts Subjects) ಗಳನ್ನು ತೆಗೆದುಕೊಳ್ಳಲೊ ? ಮುಂತಾಗಿದ್ದರೆ, ಸ್ನಾತಕೋತ್ತರ ವಿಭಾಗದಲ್ಲಿ ಮಾನವ ಶಾಸ್ತ್ರ, ವಿಜ್ಞಾನ ಶಾಸ್ತ್ರ, ಭಾಷಾ ಶಾಸ್ತ್ರ ಮುಂತಾದ ಅನೇಕ ಶಾಸ್ತ್ರಗಳ ಪ್ರತಿ ಶಾಸ್ತ್ರದಲ್ಲೂ ಭಾಗ, ವಿಭಾಗಗಳ ಭೇದ, ಅವುಗಳಲ್ಲಿ ಯಾವದಾದರೂ ಒಂದನ್ನೊ, ಎರಡನ್ನೊ ಆರಿಸಿಕೊಳ್ಳುವ ಸಮಸ್ಯೆ ಬರುತ್ತದೆ. ಮಾನವ ಶಾಸ್ತ್ರ ವಿಭಾಗವನ್ನೇ ತೆಗೆದುಕೊಂಡರೆ ಇತಿಹಾಸ, ಅರ್ಥಶಾಸ್ತ್ರ, ರಾಜಕೀಯ ಶಾಸ್ತ್ರ, ಸಮಾಜವಿಜ್ಞಾನ ಶಾಸ್ತ್ರ, ಭೂಗೋಲ ಶಾಸ್ತ್ರ ಇತ್ಯಾದಿ ಅನೇಕ ಭಾಗಗಳು ಬರುತ್ತವೆ. ನಂತರ ಇದರ ಶಾಖೋಪಶಾಖೆಗಳ ವಿಚಾರವನ್ನು ಸಹ ವಿವೇಚಿಸಬೇಕಾಗುತ್ತದೆ. ಉದಾಹರಣೆಗಾಗಿ ಸಮಾಜವಿಜ್ಞಾನ ಶಾಸ್ತ್ರ ವಿಷಯವನ್ನೇ ತೆಗೆದುಕೊಂಡರೆ Sociology, Social Anthropology, Social Welfare ಈ ಮೊದಲಾದ ಅನೇಕ ಉಪ ವಿಭಾಗಗಳನ್ನು ಕಾಣಬಹುದು. ಇದರಂತೆಯೇ ಅರ್ಥಶಾಸ್ತ್ರವನ್ನೇ ತೆಗೆದುಕೊಂಡರೆ Industrial,

Economics, Agricultural Economics, ಮೊದಲಾದ ಉಪಶಾಖೆಗಳ ವಿವರಣೆಯೂ ನಂತರ Principal Economics ತೆಗೆದುಕೊಳ್ಳಬೇಕೋ, Subsidiary Economics ತೆಗೆದುಕೊಳ್ಳಬೇಕೋ ಎಂಬ ಜಂಜಾಟ ಇದರ ಜೊತೆಗೆ ಅಲ್ಲದೇ ರಾಜಕೀಯ ಶಾಸ್ತ್ರದಲ್ಲಿಯೇ ಎಲ್ಲ ಎಂಟೂ ಪೇಪರುಗಳನ್ನು ತೆಗೆದುಕೊಳ್ಳಬೇಕೋ ಅಥವಾ ಆರು ರಾಜಕೀಯ ಶಾಸ್ತ್ರದಲ್ಲಿಯೇ ಎಲ್ಲ ಪೇಪರುಗಳನ್ನು ಉಳಿದ ಎರಡು ಪೇಪರುಗಳನ್ನು ಸಮಾಜ ಶಾಸ್ತ್ರದಲ್ಲಿ ತೆಗೆದುಕೊಂಡರೆ ಹೇಗೆ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಈ ಮುಂತಾದ ಪ್ರಶ್ನೆಗಳು ವಿದ್ಯಾರ್ಥಿ ಜೀವನದಲ್ಲಿ ತನ್ನ ಭವಿತವ್ಯವನ್ನು ರೂಪಿಸಿಕೊಳ್ಳುತ್ತಿರುವ ಅವನಿಗೆ ಬರುತ್ತವೆ. ಎಷ್ಟೋ ವಿದ್ಯಾರ್ಥಿಗಳಿಗೆ ಯಾವ ವಿಷಯಗಳನ್ನು ತೆಗೆದುಕೊಂಡರೆ ಯಾವ ವೃತ್ತಿಗೆ ಅರ್ಹರಾಗುತ್ತಾರೆ ಹಾಗೂ ತಾವು ಯಾವ ವೃತ್ತಿಯನ್ನು ಕೈಕೊಳ್ಳಲು ಅರ್ಹತೆ ಪಡೆದಿರುತ್ತಾರೆ ಎಂಬುದರ ಬಗ್ಗೆ ಕಲ್ಪನೆಯೇ ಇರುವುದಿಲ್ಲ. ಉದಾಹರಣೆಗಾಗಿ ವೃತ್ತಿಶಿಕ್ಷಣ (Professional career) ವನ್ನು ಪಡೆಯುವ ವಿದ್ಯಾರ್ಥಿಗಳು ಅಂದರೆ ಕಾಯದೆ, ತಾಂತ್ರಿಕ ಶಿಕ್ಷಣ, ವೈದ್ಯಕೀಯ ಶಿಕ್ಷಣ, ಮುಂತಾದ ಶಿಕ್ಷಣಗಳನ್ನು ಹೊಂದಲು ಇಚ್ಛಿಸುವವರು ತಾವು ಯಾವ ವೃತ್ತಿಗೆ ಅರ್ಹರೆಂದು ತಿಳಿದುಕೊಂಡಿರುವದಿಲ್ಲ. ವಾಕ್‌ಚಾತುರ್ಯ ಚರ್ಚಾತ್ಮಕ ಮನೋವೃತ್ತಿ ಇಲ್ಲದವನು ಕಾಯದೇ ಶಿಕ್ಷಣಕ್ಕೆ ಹಂಬಲಿಸುವದೂ ಚಿತ್ರಕಲೆಯಲ್ಲಿ ನಿಪುಣತೆ, ತಾಂತ್ರಿಕ ಜ್ಞಾನದ ಬಗ್ಗೆ ತೃಷೆ ಇಲ್ಲದವನು ಇಂಜಿನೀಯರನಾಗಲು ಬಯಸುವುದೂ ರಕ್ತಸ್ರಾವವನ್ನು ಕಂಡರೆ ಮೂರ್ಛೆ ಹೋಗುವ ವಿದ್ಯಾರ್ಥಿಯು ವೈದ್ಯನಾಗಲು ಹವಣಿಸುವುದು ನಿತ್ಯಜೀವನದಲ್ಲಿ ಜ್ಯೋತಿಷಿಯು ನೋಡುತ್ತಾನೆ. ಇಂತಹ ಪ್ರಸಂಗಗಳು ಇರುವಾಗ ಜ್ಯೋತಿಷಿಯು ತನ್ನ ಪೃಚ್ಛಕರ ಜಾತಕದ ಪರಿಶೀಲನೆಯ ಮೂಲಕ ಯಾರ ಪ್ರವೃತ್ತಿ ಯಾವ ವೃತ್ತಿಗೆ ಹೊಂದೀತು? ಯಾರ ವಿಧಿಯು ಯಾವ ಕೃತಿಗೆ ಅವನನ್ನು ನಿರ್ಮಿಸಿದೆ? ಎಂಬುದರ ವಿವೇಚನೆ ಮಾಡಿ ಸರಿಯಾದ ಮಾರ್ಗದರ್ಶನ ನೀಡಬೇಕು. ಈ ಕಾರ್ಯವು ಅತಿ ಕಷ್ಟವಾದುದೇನೋ ನಿಜ. ಯಾಕಂದರೆ ಎಷ್ಟೋ ಜ್ಯೋತಿಷಿಗಳಿಗೆ ವಿಶ್ವವಿದ್ಯಾಲಯಗಳಲ್ಲಿ ಯಾವ ಯಾವ ವಿಷಯಗಳನ್ನು ಕಲಿಸುತ್ತಾರೆಂಬ ಅರಿವೇ ಇರಲಿಕ್ಕಿಲ್ಲ. ಆದರೆ ಈ ಬಗ್ಗೆ ಮಾಹಿತಿ ಇಲ್ಲದಿದ್ದರೆ ಹತಾಶರಾಗುವ ಕಾರಣವಿಲ್ಲ. ಈ ಎಲ್ಲ ಸಮಸ್ಯೆ

ಗಳು ಬಂದಾಗ ಅವುಗಳ ಬಗ್ಗೆ ಆಸಕ್ತಿ ವಹಿಸಿ ಅವುಗಳ ಅಭ್ಯಾಸ ಮಾಡಿ ಅವುಗಳನ್ನು ಜ್ಯೋತಿಷ್ಯಶಾಸ್ತ್ರದ ಕಟ್ಟುನಿಟ್ಟುಗಳ ಮಿತಿಯೊಳಗೆ ತಂದು ಉತ್ತಮ ಪರಿಹಾರವನ್ನು ನೀಡಬೇಕು. ಈ ಕಾರ್ಯದಲ್ಲಿ ಜ್ಯೋತಿಷಿ ಯಶಸ್ವಿಯಾದರೆ ಅವನು ಸಮಾಜಸೇವೆಯಲ್ಲಿ ಅತಿ ಮುಖ್ಯವಾದ ಕೆಲಸವನ್ನು ನಿರ್ವಹಿಸಿದ ಹೆಮ್ಮೆಗೂ ಪಾತ್ರನಾಗುತ್ತಾನೆ. ಯಾಕೆಂದರೆ ಈಗ ಈ ವೃತ್ತಿಗಳ ಅಯೋಗ್ಯ ಆಯ್ಕೆಯಿಂದಾಗುತ್ತಿರುವ ಹಾನಿಗೆ (Wastage) ಮತ್ತು ಇವರ ಫಲವಾಗಿ ರಾಷ್ಟ್ರೀಯ ಮಟ್ಟದಲ್ಲಿ ಆಗುತ್ತಿರುವ ಹಾನಿಗೆ ಸ್ವಲ್ಪ ಮಟ್ಟಿಗಾದರೂ ಜ್ಯೋತಿಷಿಯು ತಡೆಗಟ್ಟಿದಂತಾಗುತ್ತದೆ. ಈ ಕೆಲಸವನ್ನು ನಿಷ್ಠೆಯಿಂದ ನಿರ್ವಹಿಸಿ ಗೌರವಕ್ಕೆ ಪಾತ್ರನಾಗಲು ಯಾವ ಜ್ಯೋತಿಷಿಗೆ ಇಚ್ಛೆ ಇಲ್ಲ ?

ಇವೆಲ್ಲವುಗಳಿಗೆ ಜ್ಯೋತಿಷ್ಯ ಶಾಸ್ತ್ರದಲ್ಲಿ ಆಧಾರ ಸಿಗಲಿಕ್ಕಿಲ್ಲ. ಹಳೆಯ ಆಧಾರಗಳ ಮೇಲೆಯೇ ಜ್ಯೋತಿಷ್ಯ ಶಾಸ್ತ್ರವನ್ನು ಬೆಳಸದೇ ಅದರ ಚೌಕಟ್ಟನ್ನು ಹೊಸ ಜೀವನಕ್ಕೆ ತಕ್ಕಂತೆ ಆಧುನಿಕ ಸಮಸ್ಯೆಗಳಿಗೆ ಯೋಗ್ಯವಾಗುವಂತೆ ವಿಸ್ತರಿಸಬೇಕು. ಅಂದರೆ ಮಾತ್ರ ಜ್ಯೋತಿಷಿಯು ತನ್ನ ಶಾಸ್ತ್ರದ ನಿಜವಾದ ಸೇವೆಯನ್ನು ಮಾಡಿದಂತಾಗುತ್ತದೆ.

**ಉದಾಹರಣೆ ೩ :** ರಾಜಕಾರಣಿಗಳ, ವಿದ್ಯಾರ್ಥಿಗಳ ಸಮಸ್ಯೆಗಳ ಹೋಲಿಕೆಗಿಂತ. ನ್ಯಾಯಾಲಯ ಪಕ್ಷಿಗಳ (courtbirds) ಸಮಸ್ಯೆಗಳು ಬಹಳ ವಿಚಿತ್ರವಾಗಿರುತ್ತವೆ. ಅವರಿಗೆ ಜ್ಯೋತಿಷಿಯು ತಮ್ಮ ವಿಶಿಷ್ಟ ಪ್ರಶ್ನೆಗಳಿಗೂ ಉತ್ತರ ಒದಗಿಸಬೇಕೆಂಬುದೇ ಆಶೆ. ಇವರು ಕೇಳುವ ರೀತಿ ಹೀಗಿದೆ. ನನಗೆ ಈ ಖಟ್ಲೆಯಲ್ಲಿ ಜಯ ದೊರೆತೀತೆ? " ಎಂದು ಪ್ರಾರಂಭಿಸುತ್ತಾರೆ. ಜ್ಯೋತಿಷಿಗೆ ಈ ಕಕ್ಷಿಗಾರರ ಜಾತಕ ದರ್ಶನದಿಂದ ಇದನ್ನು ಸುಲಭವಾಗಿ ಹೇಳಲು ಬರುತ್ತದೆ. ಆದರೆ ಈ ಕಕ್ಷಿಗಾರನಿಗೆ ಈ ಉತ್ತರದಿಂದ ಸಮಾಧಾನ ದೊರೆಯುವದಿಲ್ಲ. ಎಷ್ಟಾದರೂ ಅವನು ನ್ಯಾಯಾಲಯದ ಪಕ್ಷಿಯಲ್ಲವೆ? ಕೋರ್ಟುಗಳಲ್ಲಿ ನುರಿತ ಅನುಭವ ಪಡೆದ ಇವನು ಜ್ಯೋತಿಷಿಗೆ ಇನ್ನೇ (cross examination) (ಕ್ರಾಸ್ ಎಕ್ಸಾಮಿನೇಶನ್) ಪ್ರಾರಂಭಿಸುತ್ತಾನೆ. ಯಶಸ್ಸು ದೊರೆಯುತ್ತದೆ ಎಂಬ ಉತ್ತರ ದೊರೆತರೆ ರಾಜಿಯಾಗುತ್ತದೆಯೇ ಅಥವಾ ನ್ಯಾಯಾಲಯದಲ್ಲಿಯೇ ನಿರ್ಣಯವಾಗಿ, ಏಕೆ

ಯಾಗಿ ನನ್ನ ಪರವಾಗುವದೋ ಇಲ್ಲವೇ ಇದೇ ಮುನ್ಸಿಫ್ ಕೋರ್ಟಿಗೆ ನಿಲ್ಲುವದೋ? ಅಥವಾ ಅಪೀಲ್ ಆಗಿ ಜಜ್ಜಕೋರ್ಟ, ಹಾಯ್‌ಕೋರ್ಟಗಳ ವರೆಗೆ ಹೋಗುವುದೋ?" ಮುಂತಾದ ಅನೇಕ ತರದ ಪ್ರಶ್ನೆಗಳು ಬರುವವು. ಇಷ್ಟಕ್ಕೂ ಇವನಿಗೆ ತೃಪ್ತಿಯಾಗದೇ ಮತ್ತೆ ಕೇಳುತ್ತಾನೆ- "ಇಂಥವರು ಸಾಕ್ಷಿಗೆ ಬರುತ್ತಾರೆಯೇ? ಬಂದರೆ, ನನ್ನ ಪರ ಉತ್ತಮ ಪ್ರಭಾವ ಬೀರುವಂತೆ ಹೇಳುವರೇ ಹೇಗೆ? ಮತ್ತು ಇದೇ ಮುದ್ದತಿಗೆ ಮುಗಿಯುವದೋ ಅಥವಾ ಮುಂದೆ ಬೀಳುವದೋ" ಮುಂತಾಗಿ ಪ್ರಶ್ನೆಗಳು ಸಾಗುತ್ತವೆ. ಒಮ್ಮೊಮ್ಮೆ ಈ ಖಟ್ಲೆ ಎಷ್ಟು ದಿನಗಳ ನಂತರ ಮುಗಿದೀತು ಎಂದೂ ಕೇಳುವನು. ಈ ಪ್ರಶ್ನೆಗಳಿಗೆ ಉತ್ತರವನ್ನೀಯುವದು ಬಹಳ ಕಠಿಣ. ಈ ಸಮಸ್ಯೆಗಳು ಜ್ಯೋತಿಷಿಯ ಹಾಗೂ ಜ್ಯೋತಿಷ್ಯ ಶಾಸ್ತ್ರವನ್ನೇ ಒರೆಗೆ ಹಚ್ಚುತ್ತವೆ ಅದರೂ ಸೂಕ್ಷ್ಮ ಸೂಕ್ಷ್ಮ ವಿವೇಚನೆಗಳಿಂದ ಎಲ್ಲ ಅಂಶಗಳನ್ನು ಪರಿಶೀಲಿಸಿ ಸಮಾಧಾನಕರ ಉತ್ತರ ನೀಡುವದು ಜ್ಯೋತಿಷಿಯ ಕರ್ತವ್ಯ.

**ಉದಾಹರಣೆ ೪ :—** ಕ್ರೀಡಾಪಟುಗಳಿಗೆ ತಮ್ಮದೇ ಚಿಂತೆ. ಅವರಿಗೆ ವೃತ್ತಿಯ ಬಗ್ಗೆ ವೈಯಕ್ತಿಕ ಭವಿತವ್ಯದ ಬಗ್ಗೆ ಯೋಜನೆಯೇ ಬಹಳ ಕಡಿಮೆಯಾಗಿರುತ್ತದೆ. ಆದರೆ ಅವರ ಚಿಂತೆ ಕ್ರೀಡಾ ರಂಗದಲ್ಲಿ ತಮ್ಮ ಭವಿತವ್ಯ ಹೇಗಿದೆ ಎಂದೂ ಬೇರೆ ಬೇರೆ ಆಟಗಾರನು ತಮ್ಮ ತಮ್ಮ ಆಟದ ಬಗ್ಗೆ ಆಸ್ಥೆ ವಹಿಸುತ್ತಾನೆ. ಕ್ರಿಕೆಟ ಕ್ರೀಡಾಪಟುವಿನ ಮಹತ್ತ್ವರ ಆಸೆ, ಟೆಸ್ಟ ಪಂದ್ಯದಲ್ಲಿ ನಾನು ಆಡಬಹುದೆ? ಎಂದು ಇರುತ್ತದೆ ಕೆಲವರಿಗೆ ತಮ್ಮ ತಂಡದ ನಾಯಕನಾಗಲು ಸಾಧ್ಯವೋ ಇಲ್ಲವೋ ಎಂದು. ಇನ್ನು ಕೆಲವರಿಗೆ ಆಟದಲ್ಲಿ ಭಾಗವಹಿಸುವ ಮುನ್ನ ತಾನು ಆಟದಲ್ಲಿ ಸೆಂಚುರಿ ಹೊಡೆಯುವನೋ ಹೇಗೆ? ಇನ್ನು ಕೆಲವರು ತನಗೆ ಬೌಲಿಂಗಿನಲ್ಲಿ ಎಷ್ಟು ಹುದ್ದರಿ ಸಿಗುತ್ತವೆ? ಮತ್ತೆ ಕೆಲವರು ಕೇಳುವ ಪ್ರಶ್ನೆ ತಮ್ಮ ತಂಡದ ನಾಯಕ ಚಿತ್ತಪಟ್ಟ (Toss) ಗೆಲ್ಲುವನೇ ಹೇಗೆ ಮತ್ತೆ ಕೆಲ ಉತ್ಸಾಹೀ ಕ್ರೀಡಾಪಟುಗಳು ಕೇಳುವದೇನೆಂದರೆ ತಾನು ಸಿಕ್ಸರ (Sixer) ಹೊಡೆಯುವನೋ? ಹಾಗೂ ಹ್ಯಾಟ್ರಿಕ್ (Hattrick) ಮಾಡಲು ಸಾಧ್ಯವೇ ಎಂದು ವಿಚಾರಿಸುವರು. ಆಟದ ನಿರೀಕ್ಷಕರು ಹಾಗೂ ವಿವೀಕ್ಷಕರು ಕೇಳುವ ಪ್ರಶ್ನೆ ಎಂದರೆ ಆಟದ ನಿರ್ಣಯ (Draw or dess-sion) ಮುಂತಾಗಿ ಈ ರೀತಿಯಿಂದ ಬಗೆಬಗೆಯ ಆಟದ ಸಂಬಂಧ ಪ್ರಶ್ನೆಗಳಿರುತ್ತವೆ.

ಇವುಗಳಲ್ಲಿ ಸಾಂಪ್ರದಾಯಿಕ ಗ್ರಂಥಗಳಲ್ಲಿ ಆಧಾರ ಇರುವುದಿಲ್ಲ. ಆದರೂ ಈ ಎಲ್ಲ ಸಮಸ್ಯೆಗಳನ್ನು ಜ್ಯೋತಿಷಿಯು ಬಗೆಹರಿಸಬೇಕು. ಈ ಎಲ್ಲ ವಿಷಯಗಳಿಗೆ ನವೀನ ಉಲ್ಲೇಖನಗಳನ್ನು ತಯಾರ ಮಾಡಿಕೊಂಡು ಅವುಗಳ ಆಧಾರದ ಮೇಲೆ ಉತ್ತರಿಸಬೇಕು, ಅನುಭವ ಪಡೆದಂತೆ ಪ್ರಯೋಗಗಳನ್ನು ಹೆಚ್ಚು ಹೆಚ್ಚಾಗಿ ಮಾಡಿದಂತೆ, ಜ್ಯೋತಿಷಿಗೆ ಹೆಚ್ಚು ಹೆಚ್ಚಾಗಿ ಯಶ ದೊರೆಯುತ್ತದೆ.

**ಉದಾಹರಣೆ ೫:—** ಔದ್ಯೋಗಿಕ ಕ್ಷೇತ್ರದಲ್ಲಿ ಕಾಲಿರಿಸಲು ಯತ್ನಿಸುವವನು ಯಾವ ಉದ್ದಿಮೆಯಲ್ಲಿ ಪ್ರವೇಶಿಸಿದರೆ ಶ್ರೇಯಸ್ಸು? ಎಂದು ಕೇಳುವದುಂಟು. ಒಮ್ಮೊಮ್ಮೆ ಈ ಪ್ರಶ್ನೆಯನ್ನು ನಿಕಟಗೊಳಿಸಿ "ಅಲ್ಯುಮಿನಿಯಂ" ಕಾರ್ಖಾನೆ ತೆಗೆದರೆ ಅಥವಾ ಅಲ್ಯುಮಿನಿಯಂ ಕಾರಖಾನೆಯಲ್ಲಿ ನನಗೆ ಕೆಲಸ ದೊರೆತೀತೆ? ಅಲ್ಯುಮಿನಿಯಂ ವ್ಯಾಪಾರ ಮಾಡಿದರೆ ಒಳಿತಾದೀತೇ? ಮುಂತಾಗಿ ಕೇಳುತ್ತಾನೆ. ನಮ್ಮ ಪುರಾತನ ಜ್ಯೋತಿಷ್ಯ ಗ್ರಂಥಗಳಲ್ಲಿ ಸುವರ್ಣಾದಿ ಧಾತುಗಳ ಕಾರಕ ಗ್ರಹಗಳ ಬಗ್ಗೆ ವಿವರಣೆ ದೊರೆಯುತ್ತದೆ. ಆದರೆ ಅಲ್ಯುಮಿನಿಯಮ್ ಧಾತುವಿನ ಬಗ್ಗೆ ಸೂಚನೆ ಇಲ್ಲ. ಏಕೆಂದರೆ ಇದು ಇತ್ತೀಚಿನದು. ಇಷ್ಟು ತೊಂದರೆಯಾದರೂ ಈ ಪ್ರಶ್ನೆಗಳಿಗೆ ಉತ್ತರಿಸಬೇಕು.

**ಉದಾಹರಣೆ ೬ :–** ಹೆಸರಾಂತ ಸಂಗೀತ ವಿದ್ವಾಂಸರಿಗೆ ಆರ್ಥಿಕ ಪ್ರಶ್ನೆ ಹಾಗೂ ಯಶಸ್ಸಿನ ಸಮಸ್ಯೆಗಳ ಮಧ್ಯೆ ಸದಾಕಾಲ ಜಂಜಾಟ ನಡೆದಿರುತ್ತದೆ, ಸಂಗೀತ ವಿದ್ವಾಂಸನಿಗೆ ಕಾರ್ಯಕ್ರಮಗಳು ಬರದಿದ್ದರೆ ಅವನಿಗೆ ಆರ್ಥಿಕವಾಗಿ ಎಷ್ಟು ನಷ್ಟವೋ ಅಷ್ಟೇ ಅವನ ಪ್ರತಿಷ್ಠೆಗೂ ಕುಂದು ಎಂದು ಹೇಳಬೇಕು. ಕಾರ್ಯಕ್ರಮಗಳ ಅಭಾವದ ಸಂದಿಗ್ಧ ಪರಿಸ್ಥಿತಿಯನ್ನು ಮಾತ್ರ ಸಂಗೀತಜ್ಞ ಸಹಿಸಲಾರ. ಇಂತಹ ವಿಷಮ ಸ್ಥಿತಿ ಬಂದಾಗ ಅವನು ಜ್ಯೋತಿಷಿಗೆ ಮೊರೆ ಹೋಗುತ್ತಾನೆ. ಅವನ ಪ್ರಥಮ ಪ್ರಶ್ನೆ — "ಜ್ಯೋತಿಷಿಗಳೇ? ಕೆಲ ತಿಂಗಳುಗಳಿಂದ ಕಾರ್ಯಕ್ರಮಗಳೇ ಬಂದಿಲ್ಲ. ಎಂದು ಕಾರ್ಯಕ್ರಮ ಬರಬಹುದು ?" ಇದು ಜ್ಯೋತಿಷಿಗೆ ಸಾಧಾರಣವಾದ ಪ್ರಶ್ನೆ, ಜಾತಕದ ಪರಿಶೀಲನೆಯಿಂದ ಯೋಗಾಯೋಗಗಳನ್ನು ವೀಕ್ಷಿಸಿ ಸುಲಭವಾಗಿ ಉತ್ತರ ಕೊಡಬಹುದು. ಉದಾಹರಣೆಗೆ "ನಿಮಗೆ ಇನ್ನು ಎರಡು ವಾರಗಳಲ್ಲಿ ಕಾರ್ಯಕ್ರಮ ದೊರೆಯುತ್ತದೆ" ಎಂದು ಉತ್ತರ ಪಡೆದವನು ಎರಡನೆಯ ವಾರದಲ್ಲಿ

ತನಗೆ ಬಂದ ಕಾರ್ಯಕ್ರಮಗಳ ಆಹ್ವಾನಗಳ ಸುಗ್ಗಿಯನ್ನು ಹೊತ್ತು ಮತ್ತೆ ಜ್ಯೋತಿಷಿಗಳೆಡೆಗೆ ಧಾವಿಸುತ್ತಾನೆ. ಅವನಿಗೆ ನಾಲ್ಕು ಕಡೆಗಳಿಂದ ಆಹ್ವಾನ ಪತ್ರಿಕೆ ಬಂದಿದೆ. ಬೆಂಗಳೂರು, ಮುಂಬಯಿ, ಕಲಕತ್ತಾ ಮತ್ತು ಸ್ಥಳೀಯ ಆಕಾಶವಾಣಿ ಎಲ್ಲವೂ ಒಂದೇ ದಿನ, ಅಥವಾ ಎರಡು ಮೂರು ದಿನಗಳ ಅಂತರದಲ್ಲಿ ಬಂದಿರುತ್ತವೆ. ಈಗ ಅವನಿಗೆ ಹೊಸ ಪೇಚಾಟ, ಕಾರ್ಯಕ್ರಮಗಳಿಲ್ಲವಲ್ಲ ಎಂದು ಪೇಚಾಡುತ್ತಿದ್ದ ಕ್ಷಾಮ ಪೀಡಿತನಿಗೆ, ಮಹಾಪೂರದ ಕಾಟ, ಈ ಬಗ್ಗೆ ನಿರ್ಧರಿಸಲು ಜ್ಯೋತಿಷಿಯ ನೆರವನ್ನು ಪಡೆದಾಗಲೂ ಅವನ ಮನಸ್ಸು ಆರ್ಥಿಕ ಹಾಗೂ ಯಶಸ್ಸಿನ ಸಮಸ್ಯೆಗಳ ನಡುವೆ ತೊಳಲಾಡುತ್ತಿರುತ್ತದೆ. ಮುಂಬಯಿಯಕ್ರಿಯ ಕಾರ್ಯಕ್ರಮಕ್ಕೆ ಒಂದು ಸಾವಿರ ರೂ. ಸಂಭಾವನೆಯಾದರೆ ಕಲಕತ್ತಾ ಕಾರ್ಯಕ್ರಮಕ್ಕೆ ಎರಡು ಸಾವಿರ ರೂ. ಸಂಭಾವನೆಯ ಸೂಚನೆ ಇದೆ ಎಂದು ಭಾವಿಸೋಣ. ಬೆಂಗಳೂರಿನ ಆಹ್ವಾನವನ್ನು ಅಂಗೀಕರಿಸಿದರೆ ಕೇವಲ ಎಂಟು ನೂರು ರೂಪಾಯಿ. ಇಂತಹ ಸನ್ನಿವೇಶದಲ್ಲಿ ಈ ಮೂರರಲ್ಲಿ ಒಂದು ಕಾರ್ಯಕ್ರಮ ಅಂಗೀಕರಿಸುವ ಸಮಸ್ಯೆ ಬರುತ್ತದೆ. ಏಕೆಂದರೆ ಈ ಮೂರು ಕಾರ್ಯಕ್ರಮಗಳ ಅಂತರ ಬಹಳ ಕಡಿಮೆಯೋ ಅಥವಾ ಅವು ಮೂರೂ ಒಂದೇ ದಿನದಂದೋ ಇರುತ್ತವೆ. ಆಗ ಸಂಗೀತಕಾರನ ಮೊದಲನೆಯ ಪ್ರಶ್ನೆ — "ನನ್ನ ಕಾರ್ಯಕ್ರಮವು ಬೆಂಗಳೂರಿನಲ್ಲಿ ಯಶಸ್ವಿಯಾದೀತೇ ಅಥವಾ ಮುಂಬಯಿ ಕಲಕತ್ತಾದಲ್ಲೋ" ಎಂದು. ಈ ಪ್ರಶ್ನೆ ಕೇಳುವಾಗ ಆರ್ಥಿಕ ದೃಷ್ಟಿಯಿಂದ ಕಲಕತ್ತಾದಲ್ಲಿ ಹೆಚ್ಚು ಹಣ ಲಭಿಸುತ್ತಿದ್ದರೂ ಮುಂಬಯಿ ಅಥವಾ ಬೆಂಗಳೂರುಗಳಲ್ಲಿ ಕಾರ್ಯಕ್ರಮ ಯಶಸ್ವಿಯಾದೀತೆಂದು ಜ್ಯೋತಿಷಿಗಳ ಅಭಿಪ್ರಾಯವಾದರೆ ಆ ಸಂಗೀತಜ್ಞ ಆರ್ಥಿಕವಾಗಿ ನಷ್ಟವಾಗುವಂತಿದ್ದರೂ ಮುಂಬಯಿ ಅಥವಾ ಬೆಂಗಳೂರುಗಳಿಗೆ ಹೋಗಲು ಬಯಸುತ್ತಾನೆ.

ಕಾರ್ಯಕ್ರಮದ ಅಂತಿಮ ನಿರ್ಧಾರವೂ ಎಲ್ಲಿ ಅತ್ಯಂತ ಯಶಸ್ಸು ದೊರೆಯುವ ನಿರೀಕ್ಷೆ ಇದೆಯೋ ಆ ಸ್ಥಳಕ್ಕೆ ಆಗಿರುತ್ತದೆ. ಸಂಗೀತಜ್ಞರು ತಮ್ಮ ಯಶಸ್ಸು, ಕಾರ್ಯಕ್ರಮದ ಯಶಸ್ಸು, ಶ್ರೋತೃಗಳ ಮೇಲೆ ತಮ್ಮ ಸಂಗೀತದ ಪರಿಣಾಮ, ಮುಂತಾದ ಅಂಶಗಳಿಗೆ ಅವರು ಹೆಚ್ಚು ಮಹತ್ವ ಕೊಡುತ್ತಾರೆ. ಈ ಪ್ರಶ್ನೆಗಳಿಗೆ ಉತ್ತರ ನೀಡಲು ಜ್ಯೋತಿಷಿಯು ಅನೇಕ ವಿಷಯ

ಗಳನ್ನು ಪರಿಶೀಲಿಸಬೇಕು. ಕಾರ್ಯಕ್ರಮದ ಯಶಸ್ಸನ್ನು ನಿರ್ಧರಿಸಲು ಮುಖ್ಯವಾಗಿ ಎರಡು ಅಂಶಗಳನ್ನು ಗಮನಿಸಬೇಕು- ಕಾರ್ಯಕ್ರಮದ ದಿವ ಸಂಗೀತಕಾರನಿಗೆ ಪೂರಕವಿದೆಯೇ? ಇದನ್ನು ನೋಡುವುದು ಬಹಳ ಮುಖ್ಯ. ಏಕೆಂದರೆ ಅತಿ ಹೆಚ್ಚಿನ ಸಂಗೀತತಜ್ಞನಿಗೂ ಕೂಡ ಧ್ವನಿ ಅವನ ಅಧೀನದಲ್ಲಿರದೆ ಗ್ರಹಗಳ ನಿಯಂತ್ರದಲ್ಲಿರುತ್ತದೆ ಆದ್ದರಿಂದಲೆ ಕಾರ್ಯಕ್ರಮವಾಗುವದಿನ ಪೂರಕ ವಾಗಿದ್ದರೇ ಮಾತ್ರ ಯಶಸ್ಸು ಸಾಧ್ಯ. ೨) ಕಾರ್ಯಕ್ರಮದ ವೇಳೆಯನ್ನು ಕೂಡಾ ಸೂಕ್ಷ್ಮವಾಗಿ ಪರಿಶೀಲಿಸಬೇಕು. ಸಂಗೀತಕಾರರು ಭಿನ್ನ ಭಿನ್ನ ರಾಗಗಳನ್ನು ಭಿನ್ನ ಭಿನ್ನ ವೇಳೆಗಳಲ್ಲಿಯೇ ಹಾಡಬೇಕೆಂಬ ಕಟ್ಟು ನಿಟ್ಟಿಗೆ ಸಿಲುಕಿದವರು ಈ ನಿಯಮವನ್ನು ಸಂಗೀತಕಾರರು ಬಹಳ ನಿಷ್ಠೆ ಯಿಂದ ಪಾಲಿಸುತ್ತಾರೆ. ಆದ್ದರಿಂದ ಈ ಅಂಶಗಳನ್ನು ಜ್ಯೋತಿಷಿಯು ಅರಿತು ಗ್ರಹಗಳ ಪರಿಶೀಲನೆಮಾಡಿ ವೇಳೆಯ ಮಹತ್ವವನ್ನು ಸುಲಕ್ಷಿಸಿ ಕಾರ್ಯ ಕ್ರಮದ ಯಶಸ್ಸನ್ನು ನಿರ್ಧರಿಸಬೇಕು. ಇಲ್ಲಿ ಮತ್ತೊಂದು ವಿಷಯ ಗಮ ನಿಸಬೇಕು. ಕೆಲವು ಸಂಗೀತಜ್ಞರಿಗೆ ಕೆಲವು ರಾಗಗಳಲ್ಲಿ ಹೆಚ್ಚು ಪ್ರಭುತ್ವ ಪ್ರಾವೀಣ್ಯತೆ ಇರುತ್ತದೆ. ಹಾಡಬೇಕಾದ ವೇಳೆ, ಹಾಡುವ ರಾಗಗಳು, ಹಾಡುವ ದಿನ, ಹಾಡುವವನ ಜಾತಕ ಈ ಎಲ್ಲ ವಿಷಯಗಳ ಸಮತೋಲ ಪರೀಕ್ಷೆ ಮಾಡಿ ಯಶಗಳನ್ನು ನಿರ್ಧರಿಸಬೇಕು.

ಸಂಗೀತ ತಜ್ಞರು ಕಾರ್ಯಕ್ರಮದ ಯಶಸ್ಸಿಗೆ ಆರ್ಥಿಕ ಲಾಭಕ್ಕಿಂತ ಹೆಚ್ಚು ಮಹತ್ವ ಕೊಡುತ್ತಾರೆ. ಒಂದು ಕಾರ್ಯಕ್ರಮದಲ್ಲಿ ಸಂಗೀತಕಾರನ ಧ್ವನಿ ತನ್ನ ನಿಯಂತ್ರಣ ತಪ್ಪಿ, ಅಪಯಶಸ್ಸಿನ ಫಲವು ದೊರೆತರೆ ಅವನ ಪ್ರತಿಷ್ಠೆಗೆ ಕುಂದು, ಮುಂದಿನ ಭವಿತವ್ಯಕ್ಕೆ ಹಾನಿಯಾಗುವ ಸಂಭವಗಳು ಹೆಚ್ಚಾಗಿ ಇರುತ್ತವೆ. ಆದ್ದರಿಂದ ಜ್ಯೋತಿಷಿ ತನ್ನ ಶಾಸ್ತ್ರಜ್ಞಾನದೊಡನೆ ಸಂಗೀತದಲ್ಲಿಯ ರಾಗಗಳ ಮಹತ್ವ ಅವು ಯಾವ ಯಾವ ವೇಳೆಯಲ್ಲಿ ಹಾಡು ತ್ತಾರೆ, ಯಾವ ರಾಗದ ಪರಿಣಾಮ ಏನು? ಯಾವ ಜಾತಕನಿಗೆ ಯಾವ ರಾಗ ದಲ್ಲಿ ಪ್ರಭುತ್ವ ಇರುತ್ತದೆ ಮುಂತಾದ ಜ್ಞಾನವನ್ನು ಪಡೆದಿರಬೇಕು. ಜ್ಯೋತಿಷಿ ಗಳೇ, ನಾನು........ ದಿನ ಕಾರ್ಯಕ್ರಮದಲ್ಲಿ ಹಾಡಬೇಕು........ ಗಂಟೆಗೆ ಕಾರ್ಯಕ್ರಮವಿದೆ. ಯಾವ ರಾಗ ಹಾಡಿದರೆ ಯಶಸ್ಸು ದೊರೆತೀತು ?" ಎಂದು ಕೇಳುವ ತಜ್ಞರು ಇದ್ದಾರೆ. ಇವರ ಭವಿತವ್ಯದ ಕೆಲಸವು ಪ್ರತಿ

ಕಾರ್ಯಕ್ರಮವಾದ ಯಶಸ್ಸಿನ ಮೆಟ್ಟಿಲುಗಳ ಮೇಲೆ ರಚಿತವಾಗುವುದರಿಂದ ಈ ಪ್ರಶ್ನೆಗಳನ್ನು ತಿರಸ್ಕರಿಸದೇ ಜ್ಯೋತಿಷಿಯು ಸರಿಯಾದ ಉತ್ತರ ಕೊಡಬೇಕಾಗುತ್ತದೆ.

ಸಂಗೀತದಲ್ಲಿ ಕುಶಲತೆ ಪಡೆಯಬೇಕೆಂಬ ಉತ್ಸುಕತೆಯುಳ್ಳ ಕಲಾಪ್ರಿಯನಿಗೆ ಒಂದು ಬೃಹತ್ ಸಮಸ್ಯೆ – ಹಾಡುಗಾರಿಕೆಯಲ್ಲಿ ಪ್ರವೇಶಿಸಬೇಕೋ, ವಾದ್ಯ ಸಂಗೀತವನ್ನು ಕಲಿಯಬೇಕೋ ? ವಾದ್ಯಸಂಗೀತ ಕಲಿಯಬೇಕೆಂದು ನಿರ್ಧರಿಸಿದರೆ, ಅದರಲ್ಲಿ ಯಾವ ವಾದ್ಯವನ್ನು ಕಲಿಯಬೇಕು ? ಸಿತಾರ್ ಉತ್ತಮವೋ, ಪಿಟೀಲು (Violen) ಉಪಯುಕ್ತವೋ? ಅಥವಾ ತಬಲಾ ಕಲಿತರೆ ಒಳಿತೋ? ಈ ಎಲ್ಲ ಸಮಸ್ಯೆಗಳನ್ನು ಜ್ಯೋತಿಷಿಯು ಬಗೆಹರಿಸಬೇಕು. ಶಾಸ್ತ್ರಗಳ ಪ್ರಕಾರ ಸಂಗೀತದ ಸಾಮಾನ್ಯ ಉಲ್ಲೇಖ ದೊರೆಯುತ್ತದೆ — "ಗೀತಂ ವಾದ್ಯಂಚ ನೃತ್ಯಂಚ ತ್ರಯಂ ಸಂಗೀತ ಮುಚ್ಯತೇ ।" ಇದರಂತೆ ಸಂಗೀತವು ಗೀತ, ವಾದ್ಯ, ನೃತ್ಯಗಳ ಸಮ್ಮೇಲನ. ಇದರಂತೆಯೇ ಜ್ಯೋತಿಷ ಶಾಸ್ತ್ರದಲ್ಲಿಯೂ ಒಂದು ಸಾಮಾನ್ಯ ಉಲ್ಲೇಖ ದೊರೆಯುತ್ತದೆ. ಅದರಂತೆ "ಶುಕ್ರನು ಬಲಾಢ್ಯನಿರುವ ಜಾತಕನಿಗೆ ಲಲಿತಕಲೆಗಳಲ್ಲಿ ಪ್ರಾವೀಣ್ಯತೆ ಲಭಿಸುತ್ತದೆ." ಇದರ ಪ್ರಕಾರ ಶುಕ್ರನು ಬಲಾಢ್ಯನಿದ್ದರೆ ಒಳ್ಳ ಲಲಿತ ಕಲೆಗಳಲ್ಲಿ ಯಾವುದರಲ್ಲಾದರೂ ತಜ್ಞನಾಗಬಹುದು. ಆದರೆ ನಮ್ಮ ಪ್ರಶ್ನೆ ಅತಿ ಸೂಕ್ಷ್ಮ. ಇದು ಕೇವಲ "ನಾನು ಸಂಗೀತಜ್ಞನಾಗಬಹುದೇ" ಎಂದಲ್ಲ. "ನಾನು ಯಾವ ವಾದ್ಯ ಕಲಿಯಲಿ?" ಎಂದು ಸೂಕ್ಷ್ಮವಾದ ಪರಿಹಾರ ಕೊಡಬೇಕು.

ಇದರಂತೆ ಅನೇಕ ಸೂಕ್ಷ್ಮಾತಿ ಸೂಕ್ಷ್ಮ ಸಮಸ್ಯೆಗಳು, ಅನೇಕಾನೇಕವಾಗಿ ಉದಹರಿಸಬಹುದು. ಆದರೆ ಕೇವಲ ಇಲ್ಲಿ ಉದಾಹರಣೆಗಳನ್ನಾಗಿ ತೆಗೆದುಕೊಂಡವುಗಳನ್ನು ಗಮನಿಸಿದರೆ ಸಾಕು. ಆಧುನಿಕ ಯುಗದಲ್ಲಿ ಉದ್ಭವವಾಗುತ್ತಿರುವ ಸಮಸ್ಯೆಗಳನ್ನು, ಪರಿಹರಿಹರಿಸಲು ಆಧಾರಗಳ ಕೊರತೆ ಎದ್ದು ಕಾಣುತ್ತದೆ; ಸೂಕ್ಷ್ಮಾತಿ ಸೂಕ್ಷ್ಮ ಸಮಸ್ಯೆಗಳನ್ನು, ಜಗತ್ತಿನ ನಾನಾ ರಂಗಗಳನ್ನು, ನವೀನ ವಿಷಯ ಜ್ಞಾನವನ್ನು ಇಂದಿನ ಕಾಲದ ವೈಚಿತ್ರ್ಯಕರ ಮನೋವೃತ್ತಿ, ಮುಂತಾದ ಎಲ್ಲವನ್ನೂ ಅರಿಯಬೇಕಾದ ಜ್ಯೋತಿಷಿಯು

ಬಹಳ ಕಠಿಣವಾದ ಪರಿಸ್ಥಿತಿಯಲ್ಲಿರುತ್ತಾನೆ; ಆದರೆ ಎಲ್ಲ ಸಮಸ್ಯೆಗಳನ್ನು ಬಗೆಹರಿಸಲು ತನ್ನ ಶಾಸ್ತ್ರಜ್ಞಾನದೊಡನೆ ಸಾಮಾನ್ಯವಿಷಯಗಳ ಜ್ಞಾನ ಎಷ್ಟರ ಮಟ್ಟಿಗೆ ಪಡೆದಿರಬೇಕು ಎಂಬುದು ತಿಳಿದು ಬರುತ್ತದೆ. ಇದರಿಂದ ಆಧುನಿಕ ಯುಗದಲ್ಲಿ ಜ್ಯೋತಿಷಿಯ ವ್ಯವಸಾಯವು ಎಷ್ಟು ಕಠಿಣವಾದುದು ಎಂಬುದರ ಅರಿವು ಆಗುತ್ತದೆ.



೪

# ಆದರ್ಶ ಜ್ಯೋತಿಷಿ

**ಜ್ಯೋತಿಷಿಯು ತನ್ನ ವೃತ್ತಿಯಲ್ಲಿ ಯಶಸ್ವಿಯಾಗಲು ಯಾವ ಆದರ್ಶಗಳನ್ನು ಪಾಲಿಸಬೇಕು, ಎಂತಹ ವ್ಯಕ್ತಿತ್ವವನ್ನು ಹೊಂದಿರಬೇಕು.. ಇರಬೇಕಾದ ಗುಣಗಳು. ಪಾಲಿಸಬೇಕಾದ ನಿಯಮಗಳು ಯಾವವು ಎಂಬುದರ ಬಗ್ಗೆ ಈ ಪ್ರಕರಣದಲ್ಲಿ ವಿವರಿಸಲಾಗಿದೆ.**

ಆಧುನಿಕ ಯುಗದಲ್ಲಿ ಜ್ಯೋತಿಷಿಯು ತನ್ನ ಪೃಚ್ಛಕರ ಹಿತ-ಚಿಂತಕ, ಮಾರ್ಗದರ್ಶಕ ಹಾಗೂ ಪಾಲಕನಾಗಿ ತ್ರಿವಿಧ ಜವಾಬ್ದಾರಿಯನ್ನು ಹೊಂದಿದವನಾಗಿರುತ್ತಾನೆ. ಅವನು ಸಮಾಜ ಕಾರ್ಯಕರ್ತನಾಗಿ ಹೇಗೆ ಸೇವೆ ಮಾಡುವನೋ ಹಾಗೆಯೇ ಮನಃಶಾಸ್ತ್ರಜ್ಞನಾಗಿ ತನ್ನ ಪೃಚ್ಛಕರ ಇಚ್ಛಾ ಇಚ್ಛೆಗಳನ್ನರಿತು ಅವರನ್ನು ದುಗುಡದಲ್ಲಿ ಸಂತೈಸುವದೂ ಅವರು ಸಮಸ್ಯಾ ಬದ್ಧರಾದಾಗ ಪರಿಹಾರವನ್ನು ಕೊಡುವುದೂ ಹಾದಿಬಿಟ್ಟು ನಡೆದಾಗ ಹಾದಿಗೆ ಹಚ್ಚುವದನ್ನೂ ಮಾಡಿ ಸದಾಕಾಲದಲ್ಲಿ ಪೃಚ್ಛಕರ ಮನೋವೈದ್ಯನಾಗಿರುತ್ತಾನೆ. ಇಷ್ಟು ಮಹತ್ತರವಾದ ಕಾರ್ಯಭಾರವನ್ನು ವಹಿಸಿಕೊಂಡಿರುವಾಗ ಅವನು ತನ್ನ ವ್ಯಕ್ತಿತ್ವವನ್ನು ಹೇಗೆ ರೂಪಿಸಿಕೊಳ್ಳಬೇಕು? ಎಂಬುದನ್ನು ಕುರಿತು ವಿಚಾರಿಸೋಣ.

ಆಯುರ್ವೇದದ ಶಾಸ್ತ್ರಜ್ಞರಾದ ವಾಗ್ಭಟಾಚಾರ್ಯರು ತಮ್ಮ "ಅಷ್ಟಾಂಗ ಹೃದಯ" ದಲ್ಲಿ ವೈದ್ಯನು ಹೇಗಿರಬೇಕು? ಎಂಬುದರ ಬಗ್ಗೆ ಉಲ್ಲೇಖಿಸುತ್ತ ''ದಕ್ಷಸ್ತೀರ್ಥಾತ್ತ ಶಾಸ್ತ್ರಾರ್ಥೋ ದೃಷ್ಟಕರ್ಮಾಶುಚಿರ್ಭಿಷಕ್" ಎಂದು ಹೇಳಿದ್ದಾರೆ. ಈ ಉಲ್ಲೇಖವು ಜ್ಯೋತಿಷಿಗಳಾದರೂ ಅಕ್ಷರಶಃ ಅನ್ವಯಿಸುತ್ತದೆ. ಜ್ಯೋತಿಷಿಯು ಕರ್ತವ್ಯತತ್ಪರನೂ, ಚತುರನೂ. ಯೋಗ್ಯ ಗುರುಗಳಿಂದ ಸರಿಯಾದ ರೀತಿಯಲ್ಲಿ ಶಾಸ್ತ್ರವನ್ನು ಪಡೆದುಕೊಂಡವನೂ ಗುಣಗಳಲ್ಲಿ ಶಾಸ್ತ್ರ ಪ್ರಯೋಗಗಳ ಅನುಭವವನ್ನು ಸ್ವತಃ ಎಷ್ಟೋ ಸಲ ಕಂಡು

ಕೊಂಡವನೂ ಅಂತರ್ಬಾಹ್ಯ ಪಾವಿತ್ರ್ಯವುಳ್ಳವನೂ ಅರ್ಥಾತ್ ಕಾಯಾ, ವಾಚಾ, ಮನಸಾ ಶುದ್ಧನಿರಬೇಕು. ಜ್ಯೋತಿಷಿಯು ಪರಿಪೂರ್ಣ ವ್ಯಕ್ತಿತ್ವವನ್ನು ಹೊಂದಿ ಆದರ್ಶಪ್ರಾಯನಾಗಲು ಬೇಕಾದ ಜ್ಞಾನ ಸ್ವಭಾವ, ನಡತೆ, ಹಾಗೂ ಅವನು ಪರಿಪಾಲಿಸಬೇಕಾದ ನಿಯಮಗಳನ್ನು ಕುರಿತು ಕೂಲಂಕಷವಾಗಿ ಪರಿಶೀಲಿಸೋಣ.

ಜ್ಞಾನ : ಮೂರನೆಯ ಅಧ್ಯಾಯದಲ್ಲಿ ಜ್ಯೋತಿಷಿಯು ಎಷ್ಟು ಕ್ಲಿಷ್ಟ ಸಮಸ್ಯೆಗಳನ್ನು ನವೀನ ಯುಗದಲ್ಲಿ ಎದುರಿಸಬೇಕಾಗುತ್ತವೆ ಎಂಬುದನ್ನು ಪರಿಶೀಲಿಸಿದಾಗ ಜ್ಯೋತಿಷಿಯು ಜ್ಯೋತಿಷ್ಯ ಶಾಸ್ತ್ರದ ಜ್ಞಾನ ಪಡೆಯುವದರೊಡನೆ ಸಂತೃಪ್ತನಾಗದೇ ಸಾಮಾನ್ಯವಾಗಿ ಎಲ್ಲ ವಿಷಯ, ಎಲ್ಲ ಶಾಸ್ತ್ರಗಳ ಬಗ್ಗೆ ತಿಳಿದುಕೊಳ್ಳುವ ಆಸಕ್ತಿ, ಅಭಿರುಚಿ, ಜಿಜ್ಞಾಸೆ ಹೊಂದಿರಬೇಕೆಂಬುದನ್ನು ಗಮನಿಸಿದ್ದೇವೆ.

ಜ್ಯೋತಿಷ್ಯ ಶಾಸ್ತ್ರವು ಒಂದು ವಿಜ್ಞಾನವಾದರೂ ಅದನ್ನು ಕರಗತ ಮಾಡಿಕೊಂಡು ಅನುಷ್ಠಾನ ಮಾಡುವದು ಒಂದು ಕಲೆ. ಈ ಕಲೆಯಲ್ಲಿ ಪರಿಪೂರ್ಣತೆ ಹೊಂದಲು ವಾಕ್‌ಚಾತುರ್ಯದ ಸಹಕಾರ ಬೇಕು. ಶಾಸ್ತ್ರದ ಜ್ಞಾನ ಪಡೆಯುವದರೊಡನೆ ಪೃಚ್ಛಕರಿಗೆ ಹೇಳಬೇಕಾದ ವಿಷಯಗಳನ್ನು ಸಮಾಧಾನಕರವಾಗಿ, ಸಮರ್ಪಕವಾಗಿ. ಆಕರ್ಷಕವಾಗಿ ಹೇಳಲು ವಾಕ್ಪಟುತ್ವ ಬೇಕಾಗುತ್ತದೆ. ಇದನ್ನು ಸಾಧಿಸಿಕೊಳ್ಳದಿದ್ದರೆ ತಜ್ಞ ಜ್ಯೋತಿಷಿಯಾಗಲು ಸಾಧ್ಯವಾಗಲಾರದು. ಉಚ್ಚ ವೈದ್ಯಕೀಯ ಶಿಕ್ಷಣ ಪಡೆದ ವೈದ್ಯನಿಗೆ ಉತ್ತಮ ಕೈಗುಣ ಇಲ್ಲದಿದ್ದರೆ ಅವನು ತನ್ನ ವೃತ್ತಿಯಲ್ಲಿ ಹೇಗೆ ಕುಂಠಿತನಾಗುವನೋ ಹಾಗೆಯೇ ಜ್ಯೋತಿಷ್ಯ ಶಾಸ್ತ್ರದ ಪುಸ್ತಕ ಪಾಂಡಿತ್ಯ ಮಾತ್ರ ಪಡೆದ ಜ್ಯೋತಿಷಿಯು ವಾಕ್‌ಸಿದ್ಧಿ ಪಡೆಯದಿದ್ದರೆ ತನ್ನ ಪೃಚ್ಛಕರಲ್ಲಿ ಜನಪ್ರಿಯನಾಗಲಾರನು.

ಫಲಜ್ಯೋತಿಷ್ಯವನ್ನು ಕಥನ ಮಾಡುವ ಜ್ಯೋತಿಷಿಗಳಿಗೆ ಧರ್ಮಶಾಸ್ತ್ರವನ್ನು ಕೂಡ ಅಭ್ಯಾಸ ಮಾಡಿರಬೇಕು. ಅನೇಕ ಪೃಚ್ಛಕರು ಧಾರ್ಮಿಕ ವಿಷಯಗಳ ಸಂಬಂಧಿಸಿದ ವಿಧಿ, ನಿಯಮ, ನಿಷೇಧ, ಕರ್ತವ್ಯ, ಪಾಲನೆ ಮುಂತಾದ ವಿಷಯಗಳ ಬಗ್ಗೆ ಪ್ರಶ್ನೆ ಕೇಳುತ್ತಿದ್ದು ಅವುಗಳಿಗೂ ಸಮಾಧಾನ ನೀಡಬೇಕಾಗುತ್ತದೆ.

ಎಲ್ಲ ಶಾಸ್ತ್ರಗಳ ಅನುಷ್ಠಾನ, ಪ್ರಯೋಗಗಳಲ್ಲಿ ಅನುಭವದ ಪಾತ್ರ ಅತಿ ಮಹತ್ವದ್ದಾದಂತೆ ಫಲಜ್ಯೋತಿಷ್ಯ ಶಾಸ್ತ್ರವೂ ಅನುಭವಕ್ಕೆ ಅತಿ ಮಹತ್ವದ ಸ್ಥಾನವನ್ನು ಆಕ್ರಮಿಸುತ್ತದೆ. ಜ್ಯೋತಿಷಿಗೆ ಶಾಸ್ತ್ರದ ಅಭ್ಯಾಸದಿಂದ ಅನುಭವ ಹೆಚ್ಚಾಗುತ್ತದೆ, ಅವನು ನೀಡುವ ಪರಿಹಾರದ ಮಟ್ಟವೂ ಕೂಡ ಅನುಭವ ಪಡೆದಂತೆ ಹೆಚ್ಚಾಗುತ್ತ ಹೋಗುತ್ತದೆ. ಸಾವಿರಾರು-ಲಕ್ಷಾಂತರ ಜಾತಕಗಳ ಪರಿಶೀಲನೆಯಿಂದ ಮತ್ತು ಬಗೆಬಗೆಯ ಮನೋವೃತ್ತಿಯುಳ್ಳ ಜನಗನ್ನು ಭೆಟ್ಟಿಯಾಗುವದರಿಂದ ನಾನಾ ವಿಧವಾದ ಸಮಸ್ಯೆಗಳ ಅರಿವು, ಅನುಭವ ಅವನಿಗುಂಟಾಗುತ್ತದೆ. ಮತ್ತು ಅನುಭವ ಪಡೆದಂತೆ ಪರಿಪೂರ್ಣತೆಯ ಕಡೆಗೆ ಹೋಗುತ್ತಾನೆ. ಜ್ಯೋತಿಷಿಯು ತನ್ನ ಕೆಲಸವನ್ನು ಕರ್ತವ್ಯ ದೃಷ್ಟಿಯಿಂದಲೂ ಜ್ಞಾನ ತೃಷೆಯ ಮನೋವೃತ್ತಿಯಿಂದಲೂ ವಿಶ್ಲೇಷಣಾತ್ಮಕ ಹಾಗೂ ವಿವೇಚನಾತ್ಮಕ ಪ್ರವೃತ್ತಿಯಿಂದಲೂ ಮಾಡಿದಾಗ ಮಾತ್ರ ಶಾಸ್ತ್ರಜ್ಞಾನ ವರ್ಧಿಸುವದು. ಕೇವಲ ವ್ಯಾಪಾರಾತ್ಮಕ ದೃಷ್ಟಿಯಿಂದ ಮಾಡಿದಲ್ಲಿ ಜ್ಞಾನದ ಅಭಿವೃದ್ಧಿ ಸಾಧ್ಯವಾಗಲಾರದು.

ಜ್ಯೋತಿಷಿಯ ವಯೋಮಿತಿಯ ಬಗ್ಗೆ, ವಾದವಿವಾದಗಳು ಇದ್ದಂತೆ ತೋರುತ್ತವೆ. ಕೆಲವರು ಯುವಕರು ಜ್ಯೋತಿಷಿಗಳಾಗಲು ಯೋಗ್ಯರಲ್ಲವೆಂಬ ಅಭಿಪ್ರಾಯವನ್ನು ತಾಳಿರುತ್ತಾರೆ, ಅವರ ದೃಷ್ಟಿಯಲ್ಲಿ ಜ್ಯೋತಿಷಿಯು ಹುಟ್ಟಿದಾಗಲೇ ೫೦ ವರ್ಷದವನಿರಬೇಕೋ ಏನೋ ಎಂದು ಭಾಸವಾಗುತ್ತದೆ. ಆದರೆ ಈ ಪ್ರಶ್ನೆಗೆ ಉತ್ತರ ಜ್ಯೋತಿಷಿಯ ವಯಸ್ಸಿನ ನಿರ್ಧಾರದಲ್ಲಿಲ್ಲ. ಅದು ಅವನ ಬುದ್ಧಿಮತ್ತೆಯು, ಬೌದ್ಧಿಕ ಪರಿಪಕ್ವತೆಯು, ಜೀವನದ ದೃಷ್ಟಿಯ ಗುಣಗಳಲ್ಲಿ ಅಡಕವಾಗಿರುತ್ತದೆ. ಜ್ಯೋತಿಷಿಯು ವಯಸ್ಸಿನಲ್ಲಿ ಸಣ್ಣವನಾದರೂ ಜ್ಞಾನದಲ್ಲಿ ವೃದ್ಧನಾಗಿರಬೇಕಾಗುವದು. ಅವನ ಜೀವನದೃಷ್ಟಿಯು ಮನಃಪರಿಪಕ್ವತೆಯ ಆಧಾರದ ಮೇಲೆ ರಚಿತವಾಗಿದ್ದು, ಕಲ್ಮಷರಹಿತವಾಗಿ, ಉದಾತ್ತ ಧ್ಯೇಯಗಳ ನಿಃಸ್ವಾರ್ಥಪೂರಿತ ಧೋರಣೆಯ ಪ್ರತೀಕವಾಗಿರಬೇಕಾಗುತ್ತದೆ.

ಫಲಜ್ಯೋತಿಷ್ಯ ಶಾಸ್ತ್ರಕ್ಕೆ ಸಹಾಯಕ ವಿದ್ಯೆ ಎಂದರೆ ಮಂತ್ರ, ಯಂತ್ರ, ತಂತ್ರಗಳ ಜ್ಞಾನ. ಇದರೊಡನೆ ಭೂತೋಚ್ಚಾಟನೆಯ ವಿದ್ಯೆಯನ್ನೂ ಜ್ಯೋತಿಷಿಯು ಕಲಿತಿದ್ದರೆ ಒಳಿತು. ಇದರಲ್ಲಿ ಬಹಳ ತಪ್ಪುಗಳಿರುವದರಿಂದ

ಈ ಮಾಂತ್ರಿಕ ವಿದ್ಯೆಗಳ ಜ್ಞಾನ ಸಹಕಾರಿಯಾಗುತ್ತದೆಂದು ಇಲ್ಲಿ ಪ್ರತಿಪಾದಿಸಲಾಗಿದೆ. ಇಂದಿನ ಸಮಾಜದಲ್ಲಿ ಹಲವರಿಗೆ ಭೂತ, ಪ್ರೇತ, ಮಾಟ, ಮದ್ದುಗಳಲ್ಲಿ ನಂಬಿಕೆ ಇಲ್ಲವೆಂದು ವಾದಿಸುವರು, ಇತರ ವಾದ ವಿವಾದಕ್ಕೆ ಇಲ್ಲಿ ಹೋಗದಿದ್ದರೂ ಭೂತ ಹಿಡಿದವರ ಸಂಖ್ಯೆ, ಮಾಟದಿಂದ ತೊಂದರೆಗೀಡಾದವರ ಚಿಂತಾಜನಕ ಸ್ಥಿತಿ, ಮದ್ದಿನ ಸೇವನೆಯಿಂದ ಒದ್ದಾಡುತ್ತಿರುವವರ ದೈಹಿಕ ಹಾಗೂ ಮಾನಸಿಕ ಸ್ಥಿತಿ ಇವೆಲ್ಲವುಗಳನ್ನು ವೀಕ್ಷಿಸಲು ಹೇಳಿದರೆ ಮಾತ್ರ ಸಾಕು. ಇವುಗಳ ಕಾಟ ನಮ್ಮ ಸಮಾಜದಲ್ಲಿ ಇನ್ನೂ ಎಷ್ಟೋ ಕುಟುಂಬಗಳನ್ನು ಹಾಳು ಮಾಡುತ್ತಿವೆ. ಯಂತ್ರ ಮಂತ್ರಗಳಿಂದ ಈ ಎಲ್ಲ ತೊಂದರೆ ಕಾಟ, ಕಷ್ಟಗಳನ್ನು ನಿವಾರಿಸಿದ ಉದಾಹರಣೆಗಳನ್ನು ಸಾವಿರಾರು ಕೊಡಬಹುದು. ಜ್ಯೋತಿಷಿಗಳ ಬಳಿಗೆ ಬರುವ ಪೃಚ್ಛಕರು ಈ ಮೇಲ್ಕಾಣಿಸಿದ ತೊಂದರೆಗಳಲ್ಲಿಯೂ ಈಡಾಗಿದವರಾಗಿರುತ್ತಾರೆ. ಈ ನಿಗೂಢ (Acult Science) ಶಾಸ್ತ್ರದ ಸಹಾಯದಿಂದ ಪರಿಹಾರವನ್ನು ಒದಗಿಸಬಹುದು. ಪೃಚ್ಛಕನಿಗೆ ತನ್ನ ಜ್ಯೋತಿಷ್ಯದಲ್ಲಿರುವ ನಂಬಿಕೆ ಜ್ಯೋತಿಷಿಗೆ ಮಂತ್ರ, ಯಂತ್ರ, ತಂತ್ರಗಳಲ್ಲಿರುವ ಜ್ಞಾನ ಇವೆರಡರ ಸಮ್ಮಿಲನದಿಂದ ಪೃಚ್ಛಕನಿಗೆ ಮಾನಸಿಕವಾಗಿ ತನ್ನ ಕಷ್ಟ ಕಾರ್ಪಣ್ಯಗಳಿಂದ ಪರಿಹಾರ ದೊರೆಯುತ್ತದೆ ಎಂಬುದರಲ್ಲಿ ಸಂಶಯವಿಲ್ಲ. ಭೂತ ಪಿಶಾಚಿಗಳ ಬಾಧೆ ಮಾಟದ ವಿಕಾರ, ಮಾನಸಿಕ ರೋಗ, ಉನ್ಮಾದ, ದೃಷ್ಟಿದೋಷ, ಬಾಲಗ್ರಹ ಈ ಮೊದಲಾದ ವಿಕಾರಗಳನ್ನು ವೈದ್ಯರಗಿಂತ ಯಂತ್ರ-ಮಂತ್ರ-ತಂತ್ರ ಜ್ಞಾನ ಪಡೆದ ಜ್ಯೋತಿಷಿಗಳು ಗುಣಪಡಿಸಿದ ಉದಾಹರಣೆಗಳು ಅನೇಕವಾಗಿವೆ. ಈ ಕಾರಣದಿಂದಲೇ ಇರಬೇಕು. ಪ್ರಾಚೀನ ವೈದ್ಯಕೀಯ (ಆಯುರ್ವೇದ) ಗ್ರಂಥಗಳಾದ ಚರಕ ಸುಶ್ರುತ ಸಂಹಿತೆಗಳಲ್ಲಿ ವೈದ್ಯರು ಈ ಜ್ಞಾನವನ್ನು ಪಡೆದಿರಬೇಕೆಂದು ವಿಧಿಸಲಾಗಿದೆ.

ಜ್ಯೋತಿಷಿಯು ಮನಃಶಾಸ್ತ್ರಜ್ಞನಾಗಿರಬೇಕು. ಇದು ಜ್ಯೋತಿಷ್ಯ ಶಾಸ್ತ್ರದ ಜ್ಞಾನದಷ್ಟೇ ಮುಖ್ಯವಾದುದು. ತನ್ನ ಪೃಚ್ಛಕರ ಮನಸ್ಸಿನ ಮಾದರಿ, ಅವನ ಮಾನಸಿಕ ಸ್ವಭಾವ. ಅಭಿರುಚಿ, ಗುಣಗಳ ಬಗ್ಗೆ ಮಾಹಿತಿ ಪಡೆಯದಿದ್ದರೆ ತನ್ನ ವೃತ್ತಿಯಲ್ಲಿ ಯಶಸ್ವಿಯಾಗುವದೂ ತೊಂದರೆದಾಯಕ. ಮತ್ತು ಪೃಚ್ಛಕರನ್ನು ತೃಪ್ತಿಗೊಳಿಸುವದು ಸಾಧ್ಯವಿಲ್ಲ. ಸಿಟ್ಟಿನ ಮನೋ

ವೃತ್ತಿಯು ಪೃಚ್ಛಕರೊಡನೆ ಜ್ಯೋತಿಷಿಯು ಸಮಾಧಾನ ಪ್ರವೃತ್ತಿಯನ್ನು ತಾಳಬೇಕಾಗುತ್ತದೆ. ಕೆಲವೊಮ್ಮೆ ರೋಗಿಗಳು ವೈದ್ಯನನ್ನು ತಮ್ಮ ರೋಗ ಪೀಡಿತ ಅವಸ್ಥೆಯಲ್ಲಿ ಬಯ್ದುದ್ದೂ ಅಪಮಾನಗೊಳಿಸಿದ್ದೂ ಹೊಡೆದದ್ದೂ ಅನೇಕ ಪ್ರಸಂಗಗಳುಂಟು. ಆ ಸಮಯಗಳಲ್ಲಿ ವೈದ್ಯನು ಸಮಾಧಾನದಿಂದ ರೋಗಿಯೊಡನೆ ವರ್ತಿಸುತ್ತಾನೆ, ಯಾಕಂದರೆ ಅವನು ರೋಗಿಯು ಗುಣ ಮುಖವಾದಿರುವಲ್ಲಿ ಶ್ರದ್ಧೆಯನ್ನಿರಿಸಿಕೊಂಡಿರುತ್ತಾನೆ. ಹಾಗೆಯೇ ಜ್ಯೋತಿಷಿಯು ಪೃಚ್ಛಕನ ಸ್ವಭಾವ, ಮನಸ್ಸಿಗೆ ತಕ್ಕಂತೆ ಅವನ ಸಮಾಧಾನಕ್ಕಾಗಿ ಶ್ರಮಿಸಬೇಕು. ಪೃಚ್ಛಕನ ಮನಸ್ಸಿನ ಹದವನ್ನು ಅನುಸರಿಸಿ ಸಮಾಧಾನ ಪರಿಹಾರ ಉತ್ತರಗಳನ್ನು ನೀಡುವ ಕಲೆಯನ್ನು ರೂಢಿಸಿಕೊಳ್ಳಬೇಕು. ಈ ಹಂತದಲ್ಲಿ ಪೃಚ್ಛಕನ ಮನಸ್ಥಿತಿ ಹಾಗೂ ಜ್ಯೋತಿಷಿಯ ಉತ್ತರದ ವಿಧಾನಗಳ ಬಗೆಗೆ ಕೆಲವು ಉದಾಹರಣೆಗಳನ್ನು ಕೊಟ್ಟರೆ ಸೂಕ್ತವಾದೀತು.

**ಉದಾಹರಣೆ ೧ :** ಅಕಬರನಿಗೆ ಒಮ್ಮೆ ಕನಸು ಬಿತ್ತು. ಆ ಕನಸಿನಲ್ಲಿ ತನ್ನ ಎಲ್ಲ ಹಲ್ಲುಗಳು ಬಿದ್ದಂತಾಗಿತ್ತು. ಈ ಕನಸಿನ ಪರಿಣಾಮವನ್ನು ಅರಿಯಬೇಕೆಂಬ ಕುತೂಹಲದಿಂದ ತನ್ನ ಆಸ್ಥಾನದ ಜ್ಯೋತಿಷಿಗಳನ್ನು ಕರೆಸಿ ಕನಸಿನ ಪರಿಣಾಮದ ಬಗ್ಗೆ ವಿಚಾರಿಸಿದನು. ಅವರಲ್ಲಿ ಹಲವರು "ಇದು ಬಹಳ ಅನಿಷ್ಟಕರವಾದದ್ದು. ನಿಮ್ಮ ಎಲ್ಲ ಮಕ್ಕಳ ಮರಣವು ನಿಮಗಿಂತ ಮೊದಲೇ ಸಂಭವಿಸುವದು" ಎಂದರು. ಅಕಬರನಿಗೆ ಈ ಅನಿಷ್ಟ ಕಾರಕ ಭವಿಷ್ಯ ನುಡಿದ ಬಡ ಜ್ಯೋತಿಷಿಯ ಮೇಲೆ ಆಕ್ರೋಶ ಉಂಟಾಗಿ ಅವರೆಲ್ಲರಿಗೂ ಶಿಕ್ಷೆಯನ್ನು ವಿಧಿಸಿದನು. ನಂತರ ಈ ವಿಷಯವನ್ನು ಬೀರಬಲ್ಲನಿಗೆ ಹೇಳಿದಾಗ ಅವನು "ಅಯ್ಯೋ! ಜ್ಯೋತಿಷಿಗಳ ಭವಿಷ್ಯವನ್ನು ನೀವು ಅಪಾರ್ಥಕ್ಕೆ ಈಡು ಮಾಡಿದ್ದೀರಿ. ಅದರ ಅರ್ಥ ಹೀಗೆ : ಅದು ನಿಮ್ಮ ದೀರ್ಘಾಯುಷ್ಯವನ್ನು ಸೂಚಿಸುತ್ತದೆ! ಎಂದನು. ಅಕಬರನಿಗೆ ತನ್ನ ದೀರ್ಘಾಯುಷ್ಯದ ಶುಭ ಸಮಾಚಾರ ಕೇಳಿ ಸಂತೋಷವಾಯಿತು, ಬೀರಬಲ್ಲನಿಗೆ ಯುಕ್ತ ಸಂಭಾವನೆ ರಾಜಮರ್ಯಾದೆಗಳು ಪ್ರಾಪ್ತವಾದವು. ಬೀರಬಲ್ಲನು ಇತರ ಜ್ಯೋತಿಷಿಗಳು ಹೇಳಿದ್ದನ್ನೇ ಹೇಳಿದನೆಂಬುದು ನಿಜ. ಆದರೆ ಅವನು ರಾಜನ ಸಂತೋಷಕ್ಕನುಗುಣವಾಗಿ ಹೇಳಿದ್ದಕ್ಕೆ ಅವನಿಗೆ ಯಶ ಲಭಿಸಿತು. ರಾಜನಿಗೂ ಸಂತೋಷವುಂಟಾಯಿತು.

**ಉದಾಹರಣೆ ೨ :—** ಸಂಕಷ್ಟಗಳ ತಿರುಗಣಿ ಮಡುವಿನಲ್ಲಿ ಸಿಕ್ಕು ಒದ್ದಾಡುತ್ತಿರುವ ಓರ್ವ ಪೃಚ್ಛಕನು ತನ್ನ ಭವಿಷ್ಯದ ಬಗೆಗೆ ಅರಿಯುವ ಕುತೂಹಲದಿಂದ ಜ್ಯೋತಿಷಿಯ ಬಳಿಗೆ ಬರುತ್ತಾನೆ. ಜ್ಯೋತಿಷಿಯು ಅವನ ಜಾತಕದ ಪರೀಕ್ಷೆಯಿಂದ ಇನ್ನೂ ಎರಡು-ಮೂರು ತಿಂಗಳ ಕಾಲ ಅವನ ಸ್ಥಿತಿ ಗತಿ ಮತ್ತಷ್ಟು ಕೆಡುವ ಸೂಚನೆ ಇದೆ ಎಂದು ಕಂಡುಕೊಳ್ಳುತ್ತಾನೆ. ಆಗ ಅವನಿಗೆ ನಿನ್ನ ಪರಿಸ್ಥಿತಿ ಈಗಿನಕ್ಕಿಂತ ಹೆಚ್ಚು ತೊಡಕಿನದ್ದಾಗುವದಿದೆ. "ಇನ್ನೂ ಎರಡು ಮೂರು ತಿಂಗಳುಗಳಲ್ಲಿ ನಿನಗೆ ಒಂದರ ಮೇಲೊಂದು ಪ್ರಹಾರ ಕಾದಿದೆ" ಎಂದು ಹೇಳಿದರೆ, ತಿರುಗಣಿ ಮಡುವಿನಲ್ಲಿ ಸಿಕ್ಕು ಪಾರಾಗಲು ಯತ್ನಿಸುತ್ತಿರುವ ಅವನು ಸಂಪೂರ್ಣ ಹತಾಶನಾಗಿ ಕುಗ್ಗಿ ಬಿಡುತ್ತಾನೆ. ಇದೇ ವಿಷಯವನ್ನು "ಇನ್ನೆರಡು ಮೂರು ತಿಂಗಳ ನಂತರ ನಿಮ್ಮ ಯೋಗಗಳು ಬಹಳ ಉತ್ಕೃಷ್ಟವಾಗಿವೆ" ನಿಮ್ಮ ಎಲ್ಲ ಸಂಕಷ್ಟಗಳು ಪರಿಹಾರವಾಗುತ್ತವೆ" ಎಂದು ಹೇಳಿದರೆ ಅವಂಗೆ ಸಮಾಧಾನ ಮಾನಸಿಕ ವ್ಯಥತೆಗಳು ಉಂಟಾಗಿ ಆಶಾಕಿರಣದ ಬೆಳಕಿನಲ್ಲಿ ಧೈರ್ಯದ ಶಕ್ತಿಯ ಆಶ್ರಯದಲ್ಲಿ ಪಾರಾಗಲು ಪ್ರಯತ್ನಿಸುತ್ತಾನೆ.

ಆದ್ದರಿಂದ ಜ್ಯೋತಿಷಿಯು ಸಮಸ್ಯೆಗಳಿಗೆ ಸಮಾಧಾನಗಳನ್ನು ಹೇಳುವ ಮಾದರಿಯಲ್ಲಿ ತಜ್ಞನಾಗಬೇಕು. ಪೃಚ್ಛಕನ ಮನೋವೃತ್ತಿಗನುಗುಣವಾಗಿ ಅವನಿಗೆ ಆಶೋತ್ತರ ಉಂಟಾಗಿ ಭವಿಷ್ಯತ್ತಿನ ಭರವಸೆಯ ಆಧಾರದ ಮೇಲೆ ಮುಂದೆ ಸಾಗುವ ಶಕ್ತಿಯನ್ನು ಒದಗಿಸುವಂತಾಗಬೇಕು. ಈ ಮಾರ್ಗದಲ್ಲಿ ಪ್ರಾವಿಣ್ಯತೆ ಪಡೆಯುವದು ಜ್ಯೋತಿಷಿಯ ಕರ್ತವ್ಯವಾಗಿದೆ.

**ಸ್ವಭಾವ-ನಡತೆ :** ಜ್ಞಾನದ ಆಳದೊಡನೆ, ಸ್ವಭಾವ ನಡತೆಗಳ ವೈಶಾಲ್ಯವಿರಬೇಕಾಗುತ್ತದೆ. ಜ್ಯೋತಿಷಿ ವಿನಯಶಾಲಿಯೂ, ಸಮಾಧಾನಿಯೂ ದಯಾಳುವೂ, ಬಹುಶ್ರುತನೂ ಆಗಿರಬೇಕು. ಪೃಚ್ಛಕನ ಸಂಕಟಗಳ ಸಮಸ್ಯೆಗಳ ಕಡೆಗೆ ಜ್ಯೋತಿಷಿಯ ಮನಸ್ಸು ಸಂಪೂರ್ಣ ಕೇಂದ್ರೀಕೃತವಾಗಬೇಕು. ಒಬ್ಬ ಪೃಚ್ಛಕನ ಸಮಸ್ಯೆಗಳ ಬಗ್ಗೆ ಚರ್ಚಿಸುತ್ತಿರುವಾಗ ಅದರ ಬಗ್ಗೆ ಆಸಕ್ತಿ ಅದರಲ್ಲಿ ತಲ್ಲೀನತೆ ಅವನ ಬಗ್ಗೆ ಸಹಾನುಭೂತಿಗಳಿಂದ ವರ್ತಿಸಬೇಕು. ಆ ಸಮಯದಲ್ಲಿ ತನ್ನ ಮನಸ್ಸನ್ನು ಇತರ ಕಡೆಗಳಲ್ಲಿ ವಿಭೇದಿಸಿದರೆ

ಜ್ಯೋತಿಷ್ಯಶಾಸ್ತ್ರಕ್ಕೇ ಅಪಮಾನ ಬಗೆದಂತಾದೀತು. ಏಕೆಂದರೆ ಪೃಚ್ಛಕನ ಭವಿಷ್ಯದ ಪ್ರಶ್ನೆ ಇದರಲ್ಲಿಯೇ ಅಡಗಿರುತ್ತದೆ.

ಜ್ಯೋತಿಷಿಯ ವ್ಯಕ್ತಿತ್ವದ ಅಂತರಾಳವನ್ನು, ಮತ್ತವನು ಆವನ ಚಾರಿತ್ರ್ಯದ ಆಳತೆಗೋಲಿನಿಂದ ನಿರ್ಧರಿಸಬೇಕಾಗುತ್ತದೆ. ಜ್ಯೋತಿಷಿಯು ಬಹಳ ಶುದ್ಧ ಚಾರಿತ್ರ್ಯವುಳ್ಳವನಾಗಿರಬೇಕು. ಏಕೆಂದರೆ ಅವನ ಬಳಿ ಸಮಾಜದ ಎಲ್ಲ ಬಗೆಯ ವ್ಯಕ್ತಿಗಳೂ ಬರುತ್ತಿರುತ್ತಾರೆ. ಅದರಲ್ಲಿಯೂ ಹೆಚ್ಚಾಗಿ ಸ್ತ್ರೀಯರು ತಮ್ಮ ವಿವಿಧ ಕೌಟುಂಬಿಕ ಹಾಗೂ ವೈಯಕ್ತಿಕ ಸಮಸ್ಯೆಗಳನ್ನು ತೆಗೆದುಕೊಂಡು ಬರುತ್ತಿರುತ್ತಾರೆ. ಮುಖ್ಯವಾಗಿ ಸ್ತ್ರೀಯರು ತಮ್ಮ ಕಡೆ ಬಂದಾಗ ಅವರೊಡನೆ ವರ್ತನೆ ಸರಿಯಾಗಿರಬೇಕು. ಸ್ತ್ರೀಯರ ವಿಷಯವಾಗಿ ಹೆಚ್ಚು ಪವಿತ್ರ ಮನವಿಡುವದು ತನ್ನ ಕರ್ತವ್ಯವೆಂದು ಮನದಲ್ಲಿ ಕಟೆಯುತ್ತಿರಬೇಕು. ಅವರೊಡನೆ ಮಾತನಾಡುವಾಗಲೂ ಅವರ ಸಮಸ್ಯೆಗಳನ್ನು ಬಗೆಹರಿಸುತ್ತಿರುವಾಗಲೂ ಈ ಎಲ್ಲ ಅಂಶಗಳು ರಕ್ತಗತವಾಗಿಯೂ ವ್ಯೈತುಂಬ ಚಿಕ್ಕುಗಳಿರುವಂತೆ ವರ್ತಿಸುವದೂ ಜ್ಯೋತಿಷಿಯ ಆದ್ಯ ಕರ್ತವ್ಯ.

**ನಿಯಮಗಳು :** ಮಾನವನು ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ತನ್ನ ದೈನಂದಿನ ಜೀವನದಲ್ಲಿ ಇರಬೇಕಾದ ಬಗೆ ವೃತ್ತಿಜೀವನದಲ್ಲಿ ತಾನು ಪಾಲಿಸಬೇಕಾದ ನಿಯಮಗಳು ಎಲ್ಲವೂ ಮಹತ್ವದ ಪಾತ್ರ ವಹಿಸುತ್ತವೆ. ಹಾಗೆಯೇ ಜ್ಯೋತಿಷಿಯ ಜೀವನದಲ್ಲಿಯೂ ತನ್ನ ವ್ಯಕ್ತಿತ್ವದ ಪರಿಪೂರ್ಣತೆ ಪಡೆದು, ಆದರ್ಶದ ಶಿಖರವನ್ನು ಏರಲು ಜ್ಞಾನದ ಆಳ, ನಡತೆ ಸ್ವಭಾವಗಳ ವೈಶಾಲ್ಯತೆಯೊಡನೆ ನಿಯಮಗಳ ಪರಿಪಾಲನೆಯು ಎತ್ತರವೂ ಕ್ರೋಢೀಕೃತವಾಗಿರಬೇಕಾಗುತ್ತದೆ

ಜ್ಯೋತಿಷಿಯು ಶುದ್ಧ ಚಾರಿತ್ರ್ಯ, ಉತ್ತಮ ನಡತೆ ಮುಂತಾದ ಸುಗುಣಗಳ ಪರಿಪಾಲನೆಗೆ ತನ್ನ ಜೀವನದಲ್ಲಿ ನಿತ್ಯ-ನಿಯಮಗಳನ್ನು ಹಾಕಿಕೊಳ್ಳುವುದರೊಡನೆ ತಾನು ತತ್ವಪ್ರತಿಪಾದಕನಷ್ಟೇ ಅಲ್ಲದೇ ತತ್ವ ಪರಿಪಾಲಕನಾಗಿರಬೇಕು. ಆಗ ಜ್ಯೋತಿಷಿಯ ವ್ಯಕ್ತಿತ್ವಕ್ಕೆ ಚೊಕ್ಕ ಸುವರ್ಣದ ಮೆರಗು ಬರುತ್ತದೆ, ಇವನ ಜೀವನವು ಪ್ರಕಾಶಮಾನವಾದ ಜ್ಯೋತಿಯಾಗಿ ಮಾರ್ಗದರ್ಶನವನ್ನೀಯಬೇಕಾಗುತ್ತದೆ.

ಜ್ಯೋತಿಷಿಯಲ್ಲಿ ಬರುವ ಸಾವಿರಾರು ಪೃಚ್ಛಕರು ತಮ್ಮ ಮನಸ್ಸಿನ ಅಂತರಾಳದ ತಳದಲ್ಲಿ ಅಡಕವಾಗಿರುವ ಗುಟ್ಟುಗಳನ್ನು ಕೂಡ ಅವನೊಂದಿಗೆ ಹೇಳುತ್ತಾರೆ. ಪೃಚ್ಛಕನ ದೃಷ್ಟಿಯಲ್ಲಿ ಜ್ಯೋತಿಷಿಯು ತನ್ನ ಗುಟ್ಟುಗಳನ್ನು ಯಾರಿಗೂ ಬಿಟ್ಟುಕೊಡುವುದಿಲ್ಲವೆಂಬ ನಂಬಿಕೆ. ವಿಶ್ವಾಸವಿರುತ್ತದೆ. ಪ್ರತಿ ಜ್ಯೋತಿಷಿಯೂ ತನ್ನ ಗೌರವದ ರಕ್ಷಣೆ ಹಾಗೂ ಪೃಚ್ಛಕನ ಹಿತದ ಸಲುವಾಗಿ ಎಂತಹ ಕಠಿಣ ಪ್ರಸಂಗದಲ್ಲಿಯೂ ಅವನ ಗುಟ್ಟನ್ನು ಬಯಲಿಗೆಳೆಯಬಾರದು.

ಜ್ಯೋತಿಷಿಯು ತನ್ನ ಅಂತಸ್ತು. ಗೌರವ, ಸ್ಥಾನಮಾನಗಳ ಬಗ್ಗೆ ಪರಿವೆಯನ್ನಿರಿಸಿಕೊಂಡಿರಬೇಕು. ಜ್ಯೋತಿಷ್ಯಶಾಸ್ತ್ರವು ಬೀದಿಯಲ್ಲಿ ಬಿದ್ದ, ಕಡೆಗಣಿಸಿದ ವಿದ್ಯೆಯಲ್ಲ. ಇದು ಉತ್ತಮೋತ್ತಮವಾದ. ಅತಿ ಸೂಕ್ಷ್ಮ ಶಾಸ್ತ್ರವೆಂದೂ ಪ್ರಚಾರ ಮಾಡುವದರೊಡನೆ ಅದರ ಗೌರವವನ್ನೂ ಕಾಯಬೇಕು. ಇದಕ್ಕಾಗಿಯೇ ಜ್ಯೋತಿಷಿಗಳು ಮನೆಮನೆಗೆ ಹೋಗಿ ಜ್ಯೋತಿಷ್ಯ ಹೇಳುವ ಪರಿಪಾಟವನ್ನು ಇಟ್ಟುಕೊಳ್ಳಬಾರದು. ಜ್ಯೋತಿಷಿಗೆ ತನ್ನ ಎಲ್ಲ ಪೃಚ್ಛಕರೂ ಸರಿಸಮಾನರೇ. ಅವರು ಅಧಿಕಾರಿಗಳಿರಲಿ, ನೌಕರರಿರಲಿ. ಕಲಿತವರಿರಲಿ, ಕಲಿಯದವರಿರಲಿ. ಬಡವನಾಗಿರಲಿ, ಶ್ರೀಮಂತನಾಗಿರಲಿ. ಸಂಬಂಧಿಕನಿರಲಿ, ಅಪರಿಚಿತರಿರಲಿ, ಪ್ರತಿಷ್ಠಿತನಿರಲಿ- ಅಪ್ರತಿಷ್ಠನಿರಲಿ. ಆತನು ಯಾರ ಬಗ್ಗೆಯೂ ವ್ಯತ್ಯಾಸ.ಮನೋಭಾವನೆ ತೋರಬಾರದು. ಇದರಲ್ಲಿ ಯಾರೇ ಇರಲಿ ಸಮಸ್ಯೆಗಳ ಪರಿಹಾರ, ಭವಿಷ್ಯದ ಬಗ್ಗೆ ಆಸಕ್ತಿ ಇದ್ದರೆ ಅವರನ್ನು ನಿರ್ದಾಕ್ಷಿಣ್ಯವಾಗಿ ತನ್ನ ಕಾರ್ಯಾಲಯಕ್ಕೇ ಬರಲು ಹೇಳಬೇಕು. ಈ ಪ್ರಕಾರ ಮಾಡುವದರಿಂದ ಶಾಸ್ತ್ರಕ್ಕೂ ಗೌರವ, ಶಾಸ್ತ್ರಜ್ಞನಿಗೂ ಮನ್ನಣೆ ಅಲ್ಲದೇ ಪೃಚ್ಛಕರಿಗೆ ಶಾಸ್ತ್ರದ ಬಗ್ಗೆ ಭಕ್ತಿ, ವಿಶ್ವಾಸ ಮೂಡಿಸುವದಕ್ಕೆ ಸಹಾಯಕವಾಗುತ್ತದೆ. ಅಶಕ್ತರೂ ದುರ್ಬಲರೂ ದೈಹಿಕ ಅಸ್ವಸ್ಥತೆಯಾದವರಿದ್ದರೆ ಅವರಿಗಾಗಿ ಈ ನಿಯಮ ಸಡಿಲಿಸಬಹುದು. ಮತ್ತಾರಿಗೂ ರಿಯಾಯತಿ ಕೊಡಬಾರದು.

ಪೃಚ್ಛಕರು ತಮ್ಮ ಸಮಸ್ಯೆಗಳು ಬೇರೆ ಯಾರಿಗೂ ತಿಳಿಯಬಾರದೆಂದು ಆಶಿಸುವ ಹಾಗೆ, ತಾವು ಜ್ಯೋತಿಷಿಯನ್ನು ಏಕಾಂತದಲ್ಲಿಯೇ ಭೆಟ್ಟಿಯಾಗಿ ತಮ್ಮ ಸಮಸ್ಯೆಗಳನ್ನು ಚರ್ಚಿಸಬೇಕೆಂದು ಬಯಸುವರು. ಆದ್ದರಿಂದ ಪೃಚ್ಛಕರೊಡನೆ ಸಮಸ್ಯೆಗಳನ್ನು ಚರ್ಚಿಸುವಾಗ ಏಕಾಂತವನ್ನು ಒದಗಿಸಬೇಕು.

ವೈದ್ಯರು ತಮ್ಮ ರೋಗಿಗಳ (Case - paper) ಕ್ಷೇಮದ ಕಾಗದ ಕೇಸ್‌ಪೇಪರ ಇಡುವಂತೆ ಜ್ಯೋತಿಷಿಯೂ ತನ್ನ ಪೃಚ್ಛಕರ ಬಗ್ಗೆ ಕೇಸ್ ಪೇಪರ್ಸ್ ಇಡಬೇಕು. ಪೃಚ್ಛಕನ ಜಾತಕ ಅವನ ಸಮಸ್ಯೆಗಳು ಹಾಗೂ ಅವನಿಗೆ ನೀಡಿದ ಸಲಹೆ ಸೂಚನೆ, ನಿರ್ಧಾರ ಮುಂತಾದವುಗಳ ಟಿಪ್ಪಣಿಯನ್ನು ತಮ್ಮಲ್ಲಿಟ್ಟುಕೊಳ್ಳಬೇಕು. ಇದರಿಂದ ತನ್ನ ಪೃಚ್ಛಕರ ಪ್ರಗತಿಯ ಬಗ್ಗೆ ಒಂದು ಸಂಪೂರ್ಣ ನೋಟ ಜ್ಯೋತಿಷಿಗೆ ದೊರೆಯುತ್ತದೆ.

ಜ್ಯೋತಿಷಿಗಳು ಈ ಎಲ್ಲ ಆದರ್ಶಗಳು ರೂಪ-ರೇಷೆಗಳನ್ನು ತಮ್ಮ ಅಂತಃಚಕ್ಷುವಿನ ಮುಂದೆ ಯಾವಾಗಲೂ ಇರಿಸಿಕೊಂಡು ಭವ್ಯ ವ್ಯಕ್ತಿತ್ವವನ್ನು ರಚಿಸಿಕೊಂಡು ಅದರ ವಾಸ್ತವೀ ಪ್ರಭಾವದ ಶಕ್ತಿಯಿಂದ ವ್ಯಕ್ತಿಗಳ ಸಂಕಟ ನಿವಾರಣೆ ಮಾಡಿ ಸುವ್ಯವಸ್ಥಿತ ಆರೋಗ್ಯಕರ ಸಮಾಜರಚನೆಗಾಗಿ ಅವ್ಯಾಹತವಾಗಿ ಶ್ರಮಿಸಿದರೆ ಜ್ಯೋತಿಷ್ಯ ಶಾಸ್ತ್ರದ ಸೇವೆ ಹಾಗೂ ಮಾನವ ಸೇವೆ ಮಾಡಿದಂತಾಗುತ್ತದೆ.

